# ಮೈಸೂರು ಜಿಲ್ಲೆಯ ತೆಲುಗು ಅಲೆಮಾರಿಗಳ ಒಂದು ಪಂಗಡದ ಮದುವೆ ಸಂಪ್ರದಾಯ ಮತ್ತು ಜಾತಿ ಸಂಕರ

ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕ
ಆರ್. ವೆಂಕಟೇಶನ್

ಮಾರ್ಗದರ್ಶಕರು
ಪ್ರೊ|| ಓ. ಎಲ್. ನಾಗಭೂಷಣಸ್ವಾಮಿ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

ಅಕ್ಟೋಬರ್ ೩೧, ೧೯೯೫.

# ಮೈಸೂರು ಜಿಲ್ಲೆಯ ತೆಲುಗು ಅಲೆಮಾರಿಗಳ ಒಂದು ಪಂಗಡದ ಮದುವೆ ಸಂಪ್ರದಾಯ ಮತ್ತು ಜಾತಿ ಸಂಕರ

ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸಿದ ಪ್ರೌಢ ಪ್ರಬಂಧ



ಸಂಶೋಧಕ

ಆರ್. ವೆಂಕಟೇಶನ್

ಮಾರ್ಗದರ್ಶಕರು

ಪ್ರೊ|| ಓ. ಎಲ್. ನಾಗಭೂಷಣಸ್ವಾಮಿ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ

ಕನ್ನಡ ವಿಶ್ವವಿದ್ಯಾಲಯ

ಹಂಪಿ

ಅಕ್ಟೋಬರ್ ೩೧, ೧೯೯೫.

## ಅರ್ಹತಾ ಪತ್ರ

ಶ್ರೀ. ಆರ್.ವೆಂಕಟೇಶನ ಇವರು '' ಮೈಸೂರು ಜಿಲ್ಲೆಯ ತೆಲುಗು ಅಲೆಮಾರಿಗಳ ಒಂದು ಪಂಗಡದ ಮದುವೆ ಸಂಪ್ರದಾಯ ಮತ್ತು ಜಾತಿ ಸಂಕರ '' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲು ನನ್ನ ಮಾರ್ಗ ದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದರಲ್ಲಿನ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಮತ್ತು ಉದ್ದೇಶಗಳಿಗಾಗಿ ಇವರು ಒಪ್ಪಿಸಿಲ್ಲ.

31/10/95

ಸಹಿ : ಓ.ಎಲ್.ನಾಗಭೂಷಣಸ್ವಾಮಿ
ಭಾಷಾನಿಕಾಯ

ವಿದ್ಯಾರಣ್ಯ.
31.10.95.

# ಪ್ರಮಾಣ ಪತ್ರ

"ಮೈಸೂರು ಜಿಲ್ಲೆಯ ತೆಲುಗು ಅಲೆಮಾರಿಗಳ ಒಂದು ಪಂಗಡದ ಮದುವೆ ಸಂಪ್ರದಾಯ ಮತ್ತು ಜಾತಿಸಂಕರ" ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲು ಪ್ರೊ: ಓ.ಎಲ್.ನಾಗಭೂಷಣ ಸ್ವಾಮಿ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಪ್ರೌಢ ಪ್ರಬಂಧದ ಯಾವುದೇ ಭಾಗವನ್ನೇ ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ ಎಂದು ಘೋಷಿಸುತ್ತೇನೆ.

ಆರ್.ವೆಂಕಟೇಶನ್

ಆರ್.ವೆಂಕಟೇಶನ್
ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ವಿದ್ಯಾರಣ್ಯ.
31.10.95.

## ಕೃತಜ್ಞತೆಗಳು

ಎಂ.ಫಿಲ್ ಮಾಡಲು ಅವಕಾಶ ಕಲ್ಪಿಸಿದ ಮಾನ್ಯ ಕುಲಪತಿಗಳಾದ ಡಾ: ಚಂದ್ರಶೇಖರ ಕಂಬಾರರಿಗೆ ಮಾರ್ಗದರ್ಶಕರಾದ ಪ್ರೊ. ಓ.ಎಲ್. ನಾಗಭೂಷಣಸ್ವಾಮಿಯವರಿಗೆ, ನಿಬಂಧವನ್ನು ಬರೆಯುವಾಗ ಸಲಹೆಗಳನ್ನು ನೀಡಿದ ವಿದ್ವಾಂಸರಾದ ಡಾ:ಕೆ.ವಿ.ನಾರಾಯಣ ಮತ್ತು ಶ್ರೀ ಬಿ.ಎಸ್.ಸತ್ಯನಾಥ, ಪ್ರೊ:ಪುರುಷೋತ್ತಮ ಬಿಳಿಮಲೆಯ ವರಿಗೆ, ಕ್ಷೇತ್ರಕಾರ್ಯದಲ್ಲಿ ಮಾಹಿತಿ ನೀಡಿದ ಹಾಗೂ ನಿಬಂಧವನ್ನು ಬರೆಯಲು ಎಲ್ಲ ರೀತಿಯ ಸಲಹೆ ಕೊಟ್ಟ ಜನಾಂಗದವರಾದ ಕಳಲೆ ಶ್ರೀ ವೆಂಕಟರಮಣಶೆಟ್ಟಿ, ಶ್ರೀ ಮಾದಯ್ಯನವರು, ಸಣ್ಣಯ್ಯನವರಿಗೆ ಮಾಂಬಳ್ಳಿ ಗ್ರಾಮದ ಶ್ರೀ ರುದ್ರಯ್ಯನವರು, ವೆಂಕಟಬೋರಣಪ್ಪ ನವರಿಗೆ, ಕೊಳ್ಳೇಗಾಲದ ಶ್ರೀ ಷಣ್ಮುಗಂ ಅವರಿಗೆ ರೇಖಾಚಿತ್ರ ಬರೆದು ಕೊಟ್ಟ ಮ.ಕಾಳಿಗೆ ಹಾಗೂ ಫೋಟೊ ಚಿತ್ರಗಳನ್ನು ಕೊಟ್ಟ ಶ್ರೀಮತಿ ಚೇತನ ಮತ್ತು ಶ್ರೀಮತಿ ಅಂಬಿಕಾ ಹಾಗೂ ಮನೆಯವರಿಗೆ, ಎಲ್ಲಾ ರೀತಿಯ ಸಹಕಾರ ನೀಡುತ್ತಿರುವ ನನ್ನ ಅಯ್ಯ — ಅವ್ವ, ಅಣ್ಣ ಅತ್ತಿಗೆಯರಿಗೆ ಮತ್ತು ಮಡದಿಗೆ ಕೃತಜ್ಞತೆಗಳು.


ಪರಿವಿಡಿ

●●●●●●●●●●●●●●

1. <u>ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ</u> :

ಮೈಸೂರು ಜಿಲ್ಲೆಯ 14 ಗ್ರಾಮ ನಿವಾಸಿಗಳಾದ '24 ಮನೆ ತೆಲುಗು ಶೆಟ್ಟಿ' ಎಂದು ಇತ್ತೀಚಿಗಷ್ಟೆ ಕರೆದುಕೊಳ್ಳುತ್ತಿರುವ ಈ ಜನಾಂಗದ ಬಗ್ಗೆ ಇದುವರೆಗೂ ಯಾವ ಅಧ್ಯಯನಗಳು ನಡೆದಿಲ್ಲ. ಆದ್ದರಿಂದ ಕ್ಷೇತ್ರ ಕಾರ್ಯದ ಮೌಖಿಕ ಮಾಹಿತಿಯನ್ನು ಮುಖ್ಯ ಆಕರವಾಗಿಟ್ಟುಕೊಂಡು, ಈ ಜನಾಂಗದ 'ಮದುವೆ ಸಂಪ್ರದಾಯ' ಕುರಿತು ಅಧ್ಯಯನ ಮಾಡಲಾಗಿದೆ, ಹಾಗೂ ಈ ಜನಾಂಗದವರ ಎಂಟು — ಹತ್ತು ಮದುವೆಗಳಲ್ಲಿ ಸ್ವತಃ ನಾನೇ ಭಾಗವಹಿಸಿ ಗ್ರಹಿಸಿದ ವಿಚಾರಗಳನ್ನು ವಿಶ್ಲೇಷಿಸಿದ್ದೇನೆ.

ಈ ಜನಾಂಗದ ಆಚರಣೆಯ ಲಕ್ಷಣಗಳನ್ನು ಹೋಲುವ ಶಿವಮೊಗ್ಗ ಜಿಲ್ಲೆಯ 'ಸಾಧು ಶೆಟ್ಟಿ' ಜನಾಂಗ ಹಾಗೂ ತಮಿಳುನಾಡಿನಲ್ಲಿರುವ 24 ಮನೆ ತೆಲುಗು ಚೆಟ್ಟಿಯಾರ್' ಜನಾಂಗದ ಬಗ್ಗೆ ದೊರೆತಿರುವ ಮಾಹಿತಿಯನ್ನು ಅಗತ್ಯವೆಂದು ಕಂಡು ಬಂದಲ್ಲಿ ಪೂರಕವಾಗಿ ಬಳಸಿಕೊಂಡಿದ್ದೇನೆ. "ತಮಿಳುನಾಡಿನ '24 ಮನೆ ತೆಲುಗು ಚೆಟ್ಟಿಯಾರ್' ಗಳಲ್ಲಿ ಒಂದು ಪಂಗಡ ವ್ಯಾಪಾರದ ಉದ್ದೇಶದಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಗೊಂಡಿತ್ತು. ಸುಮಾರು 400 — 500 ವರ್ಷಗಳ ಹಿಂದೆ ಕರ್ನಾಟಕಕ್ಕೆ ಒಂದು ಪಂಗಡವಾಗಿ ವಲಸೆ ಬಂದ ಈ ಜನಾಂಗ, ತಮಿಳುನಾಡಿನಲ್ಲಿ ಉಳಿದ ಪೂರ್ವಿಕರೊಡನೆ ಸಂಪೂರ್ಣ ಸಂಬಂಧವನ್ನು ಕಳೆದುಕೊಂಡು ಕರ್ನಾಟಕದಲ್ಲೇ ಉಳಿಯಿತು. ಈ ವಿಚಾರ ಇತ್ತೀಚಿಗಷ್ಟೆ ನಮ್ಮ ಅರಿವಿಗೆ ಬಂತು ಎಂದು ಈ ಜನಾಂಗದ ವಿದ್ಯಾವಂತರು ಅಭಿಪ್ರಾಯಪಡುತ್ತಾರೆ."(ರಘುರಾಮಯ್ಯ, ರಾಮಕೃಷ್ಣ ಶೆಟ್ಟಿ, ವೆಂಕಟರಮಣ ಶೆಟ್ಟಿ). ತಮಿಳುನಾಡಿನ '24 ಮನೆ ತೆಲುಗು ಶೆಟ್ಟಿಯಾರ್ ಮತ್ತು ಶಿವಮೊಗ್ಗ ಜಿಲ್ಲೆಯ ಸಾಧು ಶೆಟ್ಟಿ ಜನಾಂಗದ ಆಚರಣೆಗಳಲ್ಲಿ, ವಂಶದ ಹೆಸರುಗಳಲ್ಲಿ ಸಾಮ್ಯತೆ ಕಂಡು ಬಂದರೂ ಇದುವರೆಗೂ ಮೈಸೂರು ಜಿಲ್ಲೆಯ 24 ಮನೆ ತೆಲುಗು ಶೆಟ್ಟಿಗಳು ಕೊಡುವ ತರುವ ಸಂಬಂಧವನ್ನು ಇಟ್ಟುಕೊಂಡಿಲ್ಲ.

ಒಂದೇ ಜನಾಂಗದಲ್ಲಿ ಕಂಡು ಬರುವ ವಿಭಿನ್ನ ಆಚರಣೆಗಳು ನನ್ನ ಅಧ್ಯಯನದ ಕುತೂಹಲವಾಗಿದೆ. ಅದರಲ್ಲೂ ಮದುವೆ ಸಂಪ್ರದಾಯದಲ್ಲಿ ಈ ತರಹ ವೈರುಧ್ಯಗಳು ಹೆಚ್ಚು ಕಂಡು ಬರುವುದರಿಂದ ಮದುವೆ ಸಂಪ್ರದಾಯವನ್ನು ನನ್ನ ನಿಬಂಧದ ಮುಖ್ಯ ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

ಈ ಎಲ್ಲ ಕಾರಣಗಳಿಂದ ನನ್ನ ನಿಬಂಧದ ಮೂಲ ಉದ್ದೇಶ ಈ ಜನಾಂಗದ ಮೂಲದ ಬಗ್ಗೆ ಬೆಳಕು ಚೆಲ್ಲುವುದಕ್ಕಿಂತಲೂ ಮುಖ್ಯವಾಗಿ ಅವರ ಮದುವೆ ಸಂಪ್ರದಾಯದ ವೈಶಿಷ್ಟ್ಯಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಆದ್ದರಿಂದ ಈ ಅಧ್ಯಯನಕ್ಕೆ ಪೂರಕವಾಗಿದ ಜನಾಂಗದ ಮಾಹಿತಿಯನ್ನು ಮಾತ್ರ ಬಳಸಿಕೊಂಡು ಉಳಿದ ವಿಚಾರಗಳನ್ನು ಕೈಬಿಡಲಾಗಿದೆ.

ಮೂಲತಃ ವಲಸಿಗರಾದ ಈ ಜನಾಂಗ ಮೂರು ವಿಭಿನ್ನ ಭಾಷಿಕ ನೆಲೆಗಳಲ್ಲಿ (ಅಂದರೆ ಆಂಧ್ರ – ತಮಿಳುನಾಡು – ಕರ್ನಾಟಕದಲ್ಲಿ) ಇಟ್ಟುಕೊಂಡ ಸಂಬಂಧ, ಸಂಘರ್ಷಗಳು ಸಾಂಸ್ಕೃತಿಕ ವಾಗಿ ಬಹಳ ಮುಖ್ಯವಾದ ಸಂಗತಿಗಳಾಗಿವೆ. ಹಲವು ಭಾಷಿಕ ಸಂಸ್ಕೃತಿಗಳೊಡನೆ ಸಂಬಂಧವಿಟ್ಟುಕೊಂಡ ಜನಾಂಗ ತನ್ನ ಆಳದಲ್ಲಿ ತನ್ನದೇ ಸಂಸ್ಕೃತಿಯ ಅನನ್ಯತೆಯನ್ನು ಉಳಿಸಿಕೊಳ್ಳಲು – ಪುನರಚಿಸಿಕೊಳ್ಳಲು ಹೆಣಗಾಡುತ್ತದೆ. ಇಂತಹ ಸಂಘರ್ಷ ಸಂಬಂಧಗಳಲ್ಲಿ ಒಂದು ಸಂಸ್ಕೃತಿ ಹೇಗೆ ತನ್ನ ಆಚರಣೆಗಳ ಮೂಲಕ ತನ್ನನ್ನು ಪ್ರತಿನಿಧೀಕರಿಸುತ್ತದೆ ಎಂಬುದನ್ನು ಈ ಜನಾಂಗದ ಆಚರಣೆಗಳ ಅಧ್ಯಯನದ ಮೂಲಕ ಕಾಣುವ ಪ್ರಯತ್ನ ಮಾಡಲಾಗಿದೆ. ತೀರಾ ಅಲ್ಪ ಸಂಖ್ಯಾತರಾದ ಇವರು ಪ್ರಧಾನ ಸಂಸ್ಕೃತಿಯೊಡನೆ ಇಟ್ಟುಕೊಂಡ ಸಂಬಂಧ ಹಾಗೂ ಜೀವನಾವರ್ತನಗಳಲ್ಲಿ ಆಚರಿಸುವ ಆಚರಣೆಗಳ ನಡುವೆ ಇರುವ ವಿಪರ್ಯಾಸಗಳನ್ನು ಅವರ ಆಚರಣೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ನನ್ನ ಈ ಅಧ್ಯಯನ ಮೈಸೂರು ಜಿಲ್ಲೆಯ ಕಳಲೆ, ಮಾಂಬಳ್ಳಿ, ಹೆಬ್ಬಲುಗುಪ್ಪ, ಸಾಗರೆ, ಹುಲ್ಲಹಳ್ಳಿ, ಬೇಗೂರು, ಹೆಗ್ಗನೂರು, ದೇವಲಾಪುರ, ಕೌದಳ್ಳಿ, ದೊಡ್ಡಿಂದುವಾಡಿ, ಬೂದುಬಾಳು, ಮುಡಿಗುಂಡ, ದಿಡ್ಡಾಂಪುರ, ಹೊಸೂರು 14 ಗ್ರಾಮ ನಿವಾಸಿಗಳಾದ '24 ಮನೆ ತೆಲುಗು ಶೆಟ್ಟಿಯಾರ್' ಮದುವೆ ಸಂಪ್ರದಾಯವನ್ನು ಮಾತ್ರ ಅಧ್ಯಯನ ಮಾಡಲಾಗಿದೆ.

ಆಂಧ್ರ ಮೂಲ — ತಮಿಳು ಹಾದಿ — ಕರ್ನಾಟಕದಲ್ಲಿ ನೆಲೆಯಾದ ಈ ಜನಾಂಗ, ವ್ಯಾಪಾರದ ಉದ್ದೇಶದಿಂದ ಒಂದು ಪಂಗಡ ಕರ್ನಾಟಕವನ್ನು ಪ್ರವೇಶಿಸಿರಬಹುದು. ಆದರೆ ಇವರ ಜೀವನಾವರ್ತ ಆಚರಣೆಗಳಲ್ಲಿ ಮೂರು ಭಾಷಿಕ ಸಂಸ್ಕೃತಿಗಳನ್ನು ಪ್ರತಿನಿಧಿಸುವ ಆಚರಣೆಗಳು ಕಂಡು ಬರುತ್ತವೆ.

ಹಲವು ಸಾಂಸ್ಕೃತಿಕ ಸ್ಥಿತ್ಯಂತರಗಳಲ್ಲಿ ತನ್ನ ಸಂಸ್ಕೃತಿಯ ಅನನ್ಯತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದೆ. ಆದ್ದರಿಂದ ಈ ಸಂಸ್ಕೃತಿ ನಿರಾಕರಿಸುವ ಅಂಶಗಳೆಂದು ಮೇಲುನೋಟಕ್ಕೆ ಕಾಣುವ ಅನೇಕ ಆಚರಣೆಗಳು (ಉದಾಹರಣೆಗೆ ಸೀಕನೊಳೆತರುವ ಆಚರಣೆ, ಬೆಳ್ಳಾಳಗಿತ್ತಿ ವೇಷ, ಮುಂದಿನ ಅಧ್ಯಾಯಗಳಲ್ಲಿ ಗಮನಿಸಬಹುದು ) ಸ್ವೀಕಾರ ಪ್ರವೃತ್ತಿಯನ್ನು ಹೊಂದಿದರೂ ಸಾಂಸ್ಕೃತಿಕ ವಿಪರ್ಯಾಸಗಳಂತೆ ಕಾಣುತ್ತವೆ. ಈ ಎಲ್ಲ ಸಂಗತಿಗಳನ್ನು ಅಂತರಾಂತರ ಆಚರಣೆಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

## 2. ಜನಾಂಗದ ಸ್ಥೂಲ ಪರಿಚಯ :

ಮೈಸೂರು ಜಿಲ್ಲೆಯ 14 ಗ್ರಾಮ ನಿವಾಸಿಗಳೆಂದು ಕರೆದುಕೊಳ್ಳುವ ಈ ಜನಾಂಗ 1992ರ ಕರ್ನಾಟಕ ಸರ್ಕಾರದ ಗಜೆಟ್ ಪ್ರಕಾರ ಅಧಿಕೃತವಾಗಿ '24ನೆ ತೆಲುಗು ಶೆಟ್ಟಿಯರ್' ಎಂದು ಕರೆದು ಕೊಂಡಿದ್ದಾರೆ. ಮೂಲತಃ ಅಲೆಮಾರಿಗಳಾದ ಇವರು ಆಂಧ್ರ — ತಮಿಳುನಾಡು ಈಗ ಕರ್ನಾಟಕದ ಸಂಸ್ಕೃತಿಯೊಡನೆ ಬೆರೆತು ಹೋಗಿದ್ದಾರೆ. ಇವರ ಕುಲ ಕಸುಬು ವ್ಯಾಪಾರ ಹಾಗೂ ಮನೆಮಾತು ತೆಲುಗು ಎಂದು ಹೇಳುತ್ತಾರೆ. ಆದರೆ ಇವರಾಡುವ ತೆಲುಗು ಭಾಷೆಯಲ್ಲಿ ತಮಿಳು — ಕನ್ನಡ ಪದಗಳು ವ್ಯಾಪಕವಾಗಿ ಬಳಕೆಯಲ್ಲಿ ಸೇರಿಕೊಂಡಿದೆ. ಈಗ ಮೈಸೂರು ಜಿಲ್ಲೆಯ 14 ಗ್ರಾಮಗಳಲ್ಲಿ ವಾಸ ವಾಗಿರುವ ಜನಾಂಗ ಕರ್ನಾಟಕಕ್ಕೆ ಯಾವಾಗ ಬಂದರು ಎಂಬುದಕ್ಕೆ ಖಚಿತ ಆಧಾರಗಳು ಲಭ್ಯವಾಗಿಲ್ಲ. ಜನಾಂಗ ಹಿರಿಯ ಮುಖಂಡರನ್ನು ಕೇಳಿದರೆ ನಾಲ್ಕೈದು ತಲೆಮಾರಿಗೂ ಹಿಂದೆ ಎನ್ನುತ್ತಾರೆ. ಕೆಲವರು ವಿಜಯನಗರ ಕಾಲದಲ್ಲಿರಬಹುದು ಎನ್ನುತ್ತಾರೆ. ಖಚಿತವಾದ ದಾಖಲೆಗಳು ಲಭ್ಯವಿಲ್ಲದ ಕಾರಣ ಇವರು ಕರ್ನಾಟಕಕ್ಕೆ ಬಂದ ಕಾಲ ಅಜ್ಞಾತವಾಗೇ ಉಳಿದಿದೆ. ಈ ಜನಾಂಗದ ಆಚಾರ — ವಿಚಾರಗಳನ್ನು ಹೋಲುವ ಇತರ ಅಲೆಮಾರಿ ಜನಾಂಗದ ಬಗ್ಗೆ ಇರುವ ಮಾಹಿತಿಗಳನ್ನು ಮುಂದೆ ಗಮನಿಸಬಹುದು. ತಲೆಮಾರಿನ ಲೆಕ್ಕದ ಪ್ರಕಾರ ಸುಮಾರು 400 ವರ್ಷಗಳಿಂದ ಕರ್ನಾಟಕದಲ್ಲಿ ನೆಲೆಯಾಗಿದ್ದಾರೆ ಎಂಬುದು ಖಚಿತವಾಗಿದೆ. ಕಳೆದ 30 — 40 ವರ್ಷಗಳ ಹಿಂದೆ ಬೆರಳೆಣಿಕೆಯ ಕೆಲವು ವಿದ್ಯಾವಂತರು ಅವರ ಮಕ್ಕಳನ್ನು ಶಾಲೆಗೆ ಸೇರಿಸುವಾಗ ಗಜೆಟ್ ನಲ್ಲಿ ಇವರಿಗೆ ಜನಾಂಗದ ಹೆಸರಿಲ್ಲದ ಕಾರಣ ಇವರ ~~ಆಚಾರಗಳನ್ನು~~ ಕುಲಾಚಾರಗಳನ್ನು ಹೋಲುವ, ಇತರ ಜನಾಂಗಗಳ ಹೆಸರುಗಳನ್ನು ಇಟ್ಟುಕೊಂಡರು. ಅದರಲ್ಲಿ ಮುಖ್ಯವಾಗಿ, ಬಣಜಾ, ತೆಲುಗು ಬಲಜಾ, ಗಾಣಿಗ, ಸಾಧುಶೆಟ್ಟಿ ಇತ್ಯಾದಿ. 1962 ~~1971~~ರಲ್ಲಿ ವಿದ್ಯಾವಂತರೆಲ್ಲಾ ಮೈಸೂರಿನಲ್ಲಿ ಸೇರಿ 'ಯಾಗಕ್ಷತ್ರಿಯ

ತೆಲುಗು ಶೆಟ್ಟರ ಸಂಘ" ಎಂಬ ಹೆಸರಿನಿಂದ ತಮ್ಮ ಜಾತಿಯನ್ನು ಗುರುತಿಸಿಕೊಂಡರು. ಇದು ಸಹ ಶೈಕ್ಷಣಿಕವಾಗಿ ಯಾವ ಅನುಕೂಲವನ್ನು ತಂದುಕೊಡದ ಕಾರಣ ಜನಾಂಗ ಮುಖಂಡರು ಮತ್ತೊಮ್ಮೆ ಸಭೆ ಸೇರಿ '24 ಮನೆ ತೆಲುಗು ಶೆಟ್ಟಿ" ಎಂಬ ಹೆಸರಿನಿಂದ ಕರೆಸಿಕೊಂಡರು. ಈ ತೀರ್ಮಾನಕ್ಕೆ ಬರಲು ಕಾರಣ ತಮಿಳುನಾಡಿನಲ್ಲಿರುವ 24 ಮನೆ ತೆಲುಗು ಚೆಟ್ಟಿಯಾರ್‌ಗಳು ತಮ್ಮ ಪೂರ್ವಜರು ಎಂಬುದನ್ನು ಗುರುತಿಸಿಕೊಂಡದ್ದು, ತಮಿಳು ನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದ ಈ ಜನಾಂಗ ಸುಮಾರು 300–400 ವರ್ಷಗಳ ತನಕ ತನ್ನ ಮೂಲವನ್ನು ಹುಡುಕಿಕೊಳ್ಳುವ ಪ್ರಯತ್ನವನ್ನೇ ಮಾಡಿಲ್ಲ. ಕರ್ನಾಟಕದಲ್ಲಿ "ತೆಲುಗರು" ಎಂದಷ್ಟೇ ಕರೆಸಿಕೊಂಡರು. ನಂತರ '24 ಮನೆ ತೆಲುಗು ಚೆಟ್ಟಿಯಾರ್" ಅನೇಕ ಸಂಪ್ರದಾಯ–ಟಳ ಗಳಲ್ಲಿ ಹೋಲಿಕೆ ಕಂಡು ಬಂದಾಗ 24 ಮನೆ ತೆಲುಗು ಶೆಟ್ಟಿಯಾರ್ ಎಂದು ಘೋಷಿಸಿಕೊಂಡರು.

ಕರ್ನಾಟಕದ ಮೈಸೂರು ಜಿಲ್ಲೆಯ 14 ಗ್ರಾಮ ನಿವಾಸಿಗಳೆಂದು ಕರೆದುಕೊಳ್ಳುವ ಇವರು ವಾಸಿಸುವ ಊರು ನಂಜನಗೂಡು ತಾಲೂಕಿನ ಕಳಲೆ, ಹುಲ್ಲಹಳ್ಳಿ, ಹೆಚ್.ಡಿ.ಕೋಟೆ ತಾಲೂಕಿನ ಹೆಬ್ಬಲಗುಪ್ಪೆ, ಸಾಗರೆ, ಹೆಗ್ಗನೂರು, ದೇವಲಾಪುರ, ಬೇಗೂರು, ಕೊಳ್ಳೇಗಾಲ ತಾಲೂಕಿನ ಕೌದಳ್ಳಿ, ದೊಡ್ಡಿಂದುವಾಡಿ, ಬೂದುಬಾಳು, ಮುಡಿಗುಂಡ, ಚಾಮರಾಜನಗರ ತಾಲೂಕಿನ ದಿಡ್ಡಾಪುರ, ಯಳಂದೂರು ಮಾಂಬಳ್ಳಿ, ಗುಂಡ್ಲುಪೇಟೆ ತಾಲೂಕ ಹೊನ್ನೂರು ಗ್ರಾಮಗಳಲ್ಲಿ ವಾಸವಾಗಿದ್ದಾರೆ. ಇತ್ತೀಚೆಗೆ ವ್ಯಾಪಾರದ ಉದ್ದೇಶದಿಂದ ಆಯಾಯ ತಾಲ್ಲೂಕ ಮತ್ತು ಮೈಸೂರು ಪಟ್ಟಣಕ್ಕೆ ಬಂದು ವಾಸವಾಗಿದ್ದಾರೆ. ಬೆಂಗಳೂರಿನಲ್ಲಿ ಕೆಲವು ಕುಟುಂಬ ಗಳಲ್ಲಿ ಹೋಗಿ ಸೇರಿಕೊಂಡಿವೆ. ಪೂರ್ವದ ಊರುಗಳು 14 ಗ್ರಾಮಗಳು ಮಾತ್ರ. ಈ ಜನಾಂಗದ ಶೇಕಡ 80 ರಷ್ಟು ಜನ ಈಗಲೂ

ವ್ಯಾಪಾರವನ್ನು ತಮ್ಮ ಕುಲ ಕಸುಬಾಗಿ ಮಾಡುತ್ತಿದ್ದಾರೆ. ಅಲೆಮಾರಿಗಳಾದ ಈ ಜನಾಂಗ ವ್ಯಾಪಾರಕ್ಕಾಗಿ ಇತರ ರಾಜ್ಯಗಳಾದ ಮಹಾರಾಷ್ಟ್ರ, ರಾಜಸ್ಥಾನ, ದೆಹಲಿಗಳ ತನಕ ಹೋಗುತ್ತಾರೆ. ಕೆಲವೊಮ್ಮೆ ಯಾವುದೇ ಪಾಸ್ ಪೋರ್ಟ್‌ಗಳಿಲ್ಲದೆ ಶ್ರೀಲಂಕಾ, ನೇಪಾಳ, ಅಂಡಮಾನ್‌ಗೂ ಹೋಗಿ ವ್ಯಾಪಾರಿ ಮಾಡಿ ಬಂದಿದ್ದಾರೆ. ನೆರೆಯ ರಾಜ್ಯ – ದೇಶಗಳಲ್ಲಿ ಸಾಮಾನ್ಯವಾಗಿ ನಕಲಿ ಆಭರಣಗಳನ್ನು ಮಾರಾಟ ಮಾಡುತ್ತಾರೆ. ರಾಜ್ಯದ ಒಳಗೆ ಬಟ್ಟೆ ಮಾರುವುದು ಪ್ರಧಾನ ವ್ಯಾಪಾರವಾಗಿದೆ.

ರಾಷ್ಟ್ರೀಯ – ಅಂತರ್ ರಾಷ್ಟ್ರೀಯ ಬಂಡವಾಳ ಶಾಹಿ ವ್ಯಾಪಾರದ ನೀತಿಗಳಿಗೆ ಸಮಾನವಾದ ಪೈಪೋಟಿ ಕೊಡಲು ಸಾಧ್ಯವಾಗದೆ, ಈ ಕಟಿ ಕುಲ ಕಸುಬನ್ನು ಮುಂದುವರಿಸಲೂ ಸಾಧ್ಯವಾಗದೆ ದಿಕ್ಕೆಟ್ಟಂತಿರುವ ಈ ಜನಾಂಗ. ಸಧ್ಯದ ವ್ಯಾಪಾರದಲ್ಲಂತೂ ವಸ್ತುವಿನ ಮೌಲ್ಯಕ್ಕಿಂತಲೂ ಮಾತಿನ ಕೌಶಲ್ಯ ಚತುರತೆಯ ಮೇಲೆ ವ್ಯಾಪಾರ ಮಾಡುತ್ತದೆ. ಆದ್ದರಿಂದ ಇವರ ಬಂಡವಾಳ ಅಯಾಯಾ-ವ್ಯಕ್ತಿಯ ವ್ಯಾಪಾರದ ಚತುರತೆ ಮುಖ್ಯವೇ ಹೊರತು ವ್ಯಾಪಾರದ ವಸ್ತುವಿನ ಮೌಲ್ಯ ಮುಖ್ಯವಲ್ಲ.

ಹೀಗೆ ವ್ಯಾಪಾರಕ್ಕೆ ದೂರದೂರುಗಳಿಗೆ ಹೋದಾಗ ವರ್ಷಾನುಗಟ್ಟಲೇ ತಮ್ಮ ಕುಟುಂಬದವರನ್ನು ಅಗಲಬೇಕಾಗುತ್ತದೆ. ವರ್ಷಕ್ಕೊಮ್ಮೆ ನಡೆಯುವ ಪಿತೃಪಕ್ಷಕ್ಕೆ ಪ್ರಪಂಚದ ಯಾವ ಮೂಲೆಯಲ್ಲಿದ್ದರೂ ಬಂದು ಕರ್ನಾಟಕ ಸೇರಿ ಅವರವರ ಊರುಗಳಿಗೆ ಹೋಗಿ ಹಬ್ಬ ಮಾಡುತ್ತಾರೆ. ಅಲೆಮಾರಿಗಳಾದ ಇವರು ಪಿತೃಗಳ ಬಗ್ಗೆ ತುಂಬಾ ಪೂಜ್ಯ ಭಾವನೆಯನ್ನು ಹೊಂದಿದ್ದಾರೆ. ದೂರದ ದೇಶ – ರಾಜ್ಯಗಳಿಗೆ ಹೋದಾಗ 10 – 15 ಮಂದಿ ಒಟ್ಟೊಟ್ಟಾಗಿ ಹೋಗುತ್ತಾರೆ. ತಾಲ್ಲೂಕ, ಜಿಲ್ಲಾ ಕೇಂದ್ರಗಳಲ್ಲಿ ಒಂದೆರಡು ತಿಂಗಳು ಕ್ಯಾಂಪ್ ಹಾಕುತ್ತಾರೆ. ನಂತರ ಪಕ್ಕದ ಊರುಗಳಿಗೆ ಅದೇ ಪಟ್ಟಣಗಳಿಗೆ ಒಬ್ಬೊಬ್ಬರು ಹೋಗಿ ವ್ಯಾಪಾರ ಮಾಡಿಕೊಂಡು ರಾತ್ರಿ ಕ್ಯಾಂಪ್ ಸೇರುತ್ತಾರೆ. ಈ ಕ್ಯಾಂಪುಗಳಲ್ಲಿ ವಾರಕ್ಕೆ ಎರಡು – ಮೂರು ಸಾರಿ ಮಾಂಸದಡಿಗೆ ಮಾಡುತ್ತಾರೆ. ಹಾಗೂ ತಮ್ಮ

ಬಂಧು — ಬಳಗಕ್ಕೆ ಸಂಪಾದನೆಯಾದರಲ್ಲಿ ಹಣ ಕಳುಹಿಸುತ್ತಾರೆ. ಈಗ ಇವರ ವ್ಯಾಪಾರ ಕೇಂದ್ರಗಳು ಹಳ್ಳಿಗಳಿಗಿಂತ ಪಟ್ಟಣಗಳೇ ಹೆಚ್ಚು. ಕ್ವಾಟರ್ಸ್ ಮತ್ತು ಆಫೀಸುಗಳಿಗೆ ಹೋಗಿ ವ್ಯಾಪಾರ ಮಾಡುತ್ತಾರೆ. ಒಟ್ಟಾರೆ ವ್ಯಾಪಾರವನ್ನೇ ಮಾಡಿ ಬದುಕಬೇಕಾದ ಈ ಜನಾಂಗ ತನ್ನ ಮೂಲ ಕಸುಬನ್ನು ಉಳಿಸಿಕೊಳ್ಳಲೂ ಆಗದೆ, ಬಂಡವಾಳ ಷಾಹಿ ವ್ಯಾಪಾರ ಗಳೊಡನೆ ಸ್ಪರ್ಧಿಸಲು ಸಾಧ್ಯವಾಗದೆ ತನ್ನದೇ ವ್ಯಾಪಾರ ಕೌಶಲ್ಯಗಳ ಮೂಲಕ ಜೀವನ ನಿರ್ವಹಣೆ ಸಾಗಿಸುತ್ತಿದೆ.

ಈ ಜನಾಂಗದ ಕುಲದೇವತೆ 'ಅಂಕಾಳ ಪರಮೇಶ್ವರಿ' ಮನೆ ದೇವರು ಗಳು ನಂಜುಂಡೇಶ್ವರ, ತಿರುಪತಿ ವೆಂಕಟೇಶ್ವರ, ಸುಬ್ರಮಣ್ಯ ಇತ್ಯಾದಿ ಗಳಾಗಿವೆ. ಈ ಜನಾಂಗದಲ್ಲಿ ಶೈವಧರ್ಮಗಳನ್ನು — ವೈಷ್ಣವ ಧರ್ಮಗಳನ್ನು ಕಾಣುತ್ತೇವೆ. ಇವರನ್ನೇ 'ಭಂಡಾರದವರು', 'ನಾಮದವರು' ಎಂದು ಕರೆದು ಕೊಳ್ಳುತ್ತಾರೆ. ಈ ಎರಡು ಪಂಗಡದವರಿಗೂ ಕುಲ ಗುರುಗಳೂ ಇದ್ದಾರೆ. ಭಂಡಾರದ ಗುರುಗಳು ತಮಿಳು ನಾಡಿನ ಮಹಾದೇವ ಮಲೈ ಎಂಬ ಊರಿನಿಂದ ನಾಮದ ಗುರುಗಳು ಶ್ರೀರಂಗನಿಂದ ಬರುತ್ತಾರೆ(ಇಬ್ಬರು ವರ್ಷಕೊಮ್ಮೆ ಬರುತ್ತಾರೆ). ಇವರು ವಾಸಿಸುವ ಊರುಗಳನ್ನು ಹದಿನಾಲ್ಕು ಗ್ರಾಮಗಳೆಂದು ಕರೆದಿದ್ದಾರೆ. ಇವು ಪೂರ್ವದ ಊರುಗಳಾಗಿವೆ. ಇತ್ತೀಚೆಗೆ ವ್ಯಾಪಾರದ ಉದ್ದೇಶದಿಂದ ಆಯಾ ತಾಲ್ಲೂಕುಗಳಲ್ಲಿ ಮೈಸೂರು, ಬೆಂಗಳೂರು ಗಳಲ್ಲೂ ವಾಸಿಸುತ್ತಿದ್ದಾರೆ. ಇವರು ವಾಸಿಸುವ 14 ಊರುಗಳನ್ನು ಈಗಾಗಲೇ ತಿಳಿಸಿದ್ದೇನೆ. ಇವರು ಮೈಸೂರು ಜಿಲ್ಲೆಯ ನಂಜನಗೂಡು, ಹೆಗ್ಗಡ ದೇವನಕೋಟೆ, ಗುಂಡ್ಲುಪೇಟೆ, ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಮಾತ್ರ ಕಂಡು ಬರುತ್ತದೆ.

ಈ ಜನಾಂಗ ಒಟ್ಟು ಜನಸಂಖ್ಯೆ: 5,000 ವನ್ನು ದಾಟಿಲ್ಲ. ಮಾಂಬಳ್ಳಿ, ಕಳಲೆ, ಹೆಬ್ಬಲಗುಪ್ಪೆ ಗ್ರಾಮಗಳಲ್ಲಿ 100ರಿಂದ 150 ಮನೆ ಗಳು ಇವೆ. ಉಳಿದ ಊರುಗಳಲ್ಲಿ 10ರಿಂದ 30 ಕುಟುಂಬಗಳು ಮಾತ್ರ ಕಾಣಿಸಿ ಕೊಳ್ಳುತ್ತವೆ..

## 2.i ಈ ಜನಾಂಗದ ಮೂಲ ಇತಿಹಾಸಕ್ಕೆ ಸಂಬಂಧಿಸಿದ ಇತರ ಜನಾಂಗಗಳಲ್ಲಿ ಸಿಗುವ ಮಾಹಿತಿಗಳು.:

ತಮಿಳುನಾಡಿನಲ್ಲಿರುವ '24 ಮನೆ ಚೆಟ್ಟಿ' ಜನಾಂಗದ ಮೂಲಕ್ಕೆ ಸಂಬಂಧಿಸಿದಂತೆ ಥರ್ಸ್ಟನ್ ಕೊಡುವ ಮಾಹಿತಿ ಈ ಕೆಳಕಂಡಂತೆ ಇದೆ.

"Chetti - It is noted in the Census Report 1891, that "the name Chetti is used both to denote a distinct caste, and also a title, and people bearing this title describe themselves loosely as belonging to the Chetti caste, in the same way as a Vellala will say that he is a Mudali. This use of Chetti has caused some consufison in the returns, for the sub-divisions show that many other castes have been included as well as Chetti proper." Again, in the Census Report, 1901, it is recorded that "Chetti means trader, and is one of those titular or occupational terms, which are often loosely employed as caste names. The weavers, oil pressers, and others use it as a title, and many more tack it on to their names, to denote, that trade is their occupation. Strictly employed, it is nevertheless the name of true caste". The Chettis are so numerous,

and so widely distributed, that their many sub-divisions differ very greatly in their ways. The best known of them are the Beri Chettis, the Nagarattu Chettis, the Kasukkar Chettis, and the Nattukottai Chettis. Of these, the Beri and Nattukottai Chettis are dealt with special articles. The following divisions of Chettis, inhabiting the Madura district, are recorded in my notes:-

(a) Men with head clean-shaved:

| | |
|---|---|
| Ilavagai or Karnakudi. | Thedakottai |
| Sundaraththan. | Periyakottai-vellan. |
| Ariyur | Puliyangudi |
| Malampatti | Vailam or Tiruvapur. |
| Palayapattu | Kurungalur |

(b) Men with kudumi(hair knot):-

| | |
|---|---|
| Puvaththukudi or Mannagudi. | Marayakkara |
| Kiramangalam. | Pandukudi or Manjapaththu. |
| Vallanattu. | |

Of these, the Puraththukudi Chettis, who receive their name from a village in the Tanjore district are mostly itinerant petty traders and money-lenders, who travel about the country. They carry on their shoulders a bag containing their personal effects, except when they are cooking and sleeping. I am informed that the Puraththukudi women engage women, presumably with a flow of appropriate language ready for the occa - ssion, to abusre those with whom they have a quarrel. Among the Puraththukudi Chettis, marria- ges, are for reasons of economy, only celebrated at intervals of many years. Concerning this custom, a member of the community writes to me as follows: " In our village, marriages are per- formed only once in ten or fifteen years. My own marriage was celebrated in the year Nandana(1892-93). Then seventy or eighty marriages took place. Since that time, marriages have only taken place in the present year(1906). The god at Avadaiyar Kovil (temple) is our caste god. For marriages, we must receive from that temple garlands, sandal, and palanquins. We pay to the temple thirty-five rupees for every bridegroom through our Nagaraththar

(village headmen). The expenses incurred in connection with the employement of washerman, barbers, nagasaram(musical instrument) players, talayaris (watchmen), carpenters, potters, blacksmiths, gurukkals(priests), and garland-makers, are borne collectively and shared by the families in which marriages are to take place." Another Chetti writes that this system of clubbing marriages together is practised at the villages of Puraththukudi and Mannagudi, and that the marriages of all girls of about seven years of age and upwards are celebrated. The marriages are performed in batches, and the marriage season lasts over several months.

Palayasengadam in the Trichinopoly district is the head-quarters of a section of the Chettis called the Pannirendam(twelfth) Chettis. "These are supposed to be descended from eleven youths who escaped long ago from Kaveripatnam, a ruined city in Tanjore. A Chola King, says that legent, wanted to marry a Chetti; whereupon the caste set fire to the town, and only these elven boys escaped. They rested on the Ratnagiri hill to divide their property; but however

they arranged it, it always divided itself into twelve shares instead of eleven. The god of Ratnagiri then appeared, and asked them to give him one share in exchange for a part of his car. They did so, and they now call themselves the twelfth Chettis from the number of the shares, and at their marriages they carry the bridegroom round in a car. They are said to be common in Coimbatore district." [Vol: II, Pages: 91-97, 'Castes and Tribes of Southern India' 198
EDGAR THURSTON.
K. RANGACHA

ಥರ್ಸ್ಟನ್ ತಮಿಳುನಾಡಿನ 24 ಮನೆ ಚೆಟ್ಟಿಗಳು ಮದುವೆ ಸಂದರ್ಭದಲ್ಲಿ ರಥವನ್ನು ಪ್ರದಕ್ಷಿಣೆ ಹಾಕುವ ಸಂಪ್ರದಾಯದ ಬಗ್ಗೆ ಉಲ್ಲೇಖಿಸಿದ್ದಾನೆ. ಆದರೆ ಕರ್ನಾಟಕದಲ್ಲಿರುವ 'ಮೈಸೂರು ಜಿಲ್ಲೆಯ ಈ ಜನಾಂಗದಲ್ಲಿ' ಮದುವೆ ಸಂದರ್ಭದಲ್ಲಿ ರಥ ಪ್ರದಕ್ಷಿಣೆ ಹಾಕುವ ಪದ್ಧತಿಯಿಲ್ಲ. ಆದರೆ ಸೀಕನೂಲ ತರುವ ಶಾಸ್ತ್ರ', 'ಬಳ್ಳೊಳಗಿತ್ತಿ ವೇಷ' ಹಾಕುವ ಶಾಸ್ತ್ರ ತಮಿಳುನಾಡಿನ ಚೆಟ್ಟಿಯಾರುಗಳಲ್ಲಿ ಕಂಡು ಬರುವುದಿಲ್ಲ. ಈ ಕಾರಣಗಳಿಂದ ಈ ಜನಾಂಗದ ಮದುವೆ ಸಂಪ್ರದಾಯದ ಆಚರಣೆಗಳು ಬೇರೆ ಬೇರೆ ಸಂಸ್ಕೃತಿಗಳೊಡನೆ ಹೇಗೆ ಹೊಂದಾಣಿಕೆ ಮಾಡಿಕೊಂಡು ವಿಪರ್ಯಾಸಗಳಾಗಿ ಬೆಳೆದು ಬಂದಿವೆ ಎಂಬುದನ್ನು ಮುಂದೆ ತಿಳಿಯಬಹುದು.

## 2.2 ಸಾಧುಶೆಟ್ಟಿ ಜನಾಂಗ ಮೂಲ

ಈ ಕಿರುಹೊತ್ತಿಗೆಯನ್ನು ಸಾಧುಶೆಟ್ಟಿ ಜನಾಂಗದ ಶ್ರೀ ಹೆಚ್.ಸಿ.ದೊಡ್ಡಣ್ಣ, ಶಿವಮೊಗ್ಗ ಎನ್ನುವವರು 1–10–1985ರಂದು ಪ್ರಕಟಪಡಿಸಿದ್ದಾರೆ. ಸಾಧು ಶೆಟ್ಟಿ ಜನಾಂಗದ ಮತ್ತು ವಂಶಾವಳಿಗಳ ಬಗ್ಗೆ ಕೆಲವು ಮಾಹಿತಿಗಳನ್ನು ಕೊಟ್ಟಿದ್ದಾರೆ. ಜೊತೆಗೆ ಇಲ್ಲಿರುವ ಮಾಹಿತಿ ' ಕಂಚಿ ತಾಮ್ರ ಶಾಸನ ಆಧಾರ ' ವೆಂದು ಹೇಳಿದ್ದಾರೆ. ಒಂದು ಜನಾಂಗ ತನ್ನ ಮೂಲವನ್ನು ಹುಡುಕಿಕೊಳ್ಳುವ ಪ್ರಯತ್ನಗಳ ಹಿನ್ನೆಲೆಯಲ್ಲಿಷ್ಟೇ ಈ ಕಿರು ಹೊತ್ತಿಗೆಯನ್ನು ಗಮನಿಸಲಾಗಿದೆ. ಸಾಧುಶೆಟ್ಟಿ ಸಂಘದವರೇ ಈ ಕಿರು ಹೊತ್ತಿಗೆಯನ್ನು ಪ್ರಕಟಿಸಿರುವುದರಿಂದ ಜಾತಿ ಪೂರ್ವ ಗ್ರಹಗಳಿಂದ ಪೂರ್ಣವಾಗಿ ಮುಕ್ತರಾಗಿದ್ದಾರೆ ಎಂದು ನಿರ್ಣಯಿಸುವುದು ಕಷ್ಟ. ಹಾಗೆ ಕಿರುಹೊತ್ತಿಗೆಯಲ್ಲಿ ವೈದಿಕೀಕರಣಗೊಂಡ ಅನೇಕ ಸಂಗತಿಗಳು ಕಂಡುಬರುತ್ತವೆ. ವಂಶಾವಳಿಗಳಿಗೆ ಸಂಬಂಧಿಸಿದಂತೆ ಗೋತ್ರಗಳ ಹೆಸರುಗಳನ್ನು ಸೂಚಿಸುತ್ತಾರೆ. ಈ ಗೋತ್ರಗಳಿಗೆ ಒಬ್ಬೊಬ್ಬ ಋಷಿಯ ಹೆಸರನ್ನು ಸೇರಿಸಿದ್ದಾರೆ. ಆದರೆ ವಂಶದ ಬಳಿಗಳ ಹೆಸರುಗಳು ವೃತ್ತಿಸೂಚಕ ಪದಗಳಾಗಿಯೂ ಬಳಕೆಯಾಗಿದೆ. ಆದರೆ ಕಿರು ಹೊತ್ತಿಗೆಯಲ್ಲಿ ಎಲ್ಲವನ್ನು ಋಷಿ ಮೂಲಕ್ಕೆ ಸಾಗಿಸಿದೆ.

ಕಂಚಿ ತಾಮ್ರ ಶಾಸನ ಆಧಾರವೆಂದು ಮೂಲಕ್ಕೆ ಸಂಬಂಧಿಸಿದ ಕತೆಯನ್ನು ಉಲ್ಲೇಖಿಸುವುದು ಸೂಕ್ತವೆಂದು ಭಾವಿಸಿದ್ದೇನೆ.

" ಒಂದು ದಿನ ದೂರ ದೇಶದಿಂದ ಇಪ್ಪತ್ತುನಾಲ್ಕು ಜನ ಕಳ್ಳರು ತಳಾರಿಗಳ ಹಿಂಬಾಲಿತರಾಗಿ ಓಡಿಬಂದು, ಆಶ್ರಯವಿಲ್ಲದೆ ದಿಕ್ಕು ಕಾಣದೆ ಅನಾಥರಾಗಿ ಈ ಸಾಧು ಶೆಟ್ಟರಿಗೆ ಶರಣಾಗತರಾದರು. ಈ ಸಂಗತಿಯನ್ನು ತಳಾರಿಗಳು ರಾಜನಲ್ಲಿ ದೂರಿಸಿಕೊಂಡರು. ರಾಜನು ಇವರುಗಳನ್ನು ಕರೆಸಿಕೊಂಡು ಆ ಇಪ್ಪತ್ತುನಾಲ್ಕು ಜನರನ್ನು ಬಿಟ್ಟುಕೊಡಬೇಕೆಂದು ಆಜ್ಞೆ ಮಾಡಿದನು.

ಆಗ ಶೆಟ್ಟರು ತಾವು ಶರಣಾಗತರ ರಕ್ಷಕರೆಂದೂ, ಈ ಬಿರುದನ್ನು ಕಾಪಾಡುವುದಕ್ಕೋಸ್ಕರ ತಮ್ಮ ತಲೆಗಳನ್ನು ಕೂಡ ಕೊಡಲು ಸಿದ್ಧರಿರುವೆವೆಂದೂ ರಾಜನಲ್ಲಿ ವಿಜ್ಞಾಪಿಸಿಕೊಂಡರು. ಶರಣಾಗತರಕ್ಷಕರಾದ ಸತ್ಯ ಧರ್ಮಗಳ ಪರಿಪಾಲನಾ ಕರ್ತರಾದ, ತಮ್ಮ ಕುಲದಲ್ಲಿ ಜಾರತ್ವ, ಚೋರತ್ವ ಮೊದಲಾದ ದೋಷಗಳಿಲ್ಲದವರಾದ, ಮಹಾವೀರ ಗರ್ವಿತ ವೈರಿಗಳಿಗೆ ಕಾಲಾಗ್ನಿ ಸ್ವರೂಪರಾದ, ಧರ್ಮರಣ ದೇವಿಯ ಭಕ್ತರಾದ, ಶತಾವಧಾನಿಗಳಾದ, ಉದಾರಿಗಳಾದ, ಅಷ್ಟೈಶ್ವರ್ಯ ಸಂಪನ್ನರಾದ ಪೃಥ್ವೀಶ್ವರ ವಂಶಜರಾದ ಈ ಮಹಾನುಭಾವರ ಮಾತನ್ನು ಕೇಳಿ ರಾಜನು ಆಶ್ಚರ್ಯಚಕಿತನಾದನು. ರಾಜನು ಇವರ ಶಿರಗಳನ್ನು ಕೋರಲಾಗಿ ಶ್ರೀ ನಾದು ಕಾಮಾಕ್ಷಮ್ಮನ ದಿವ್ಯ ಸನ್ನಿಧಿಯ ಆಶ್ರಯದಲ್ಲಿ ತಮ್ಮ ಇಪ್ಪತ್ತನಾಲ್ಕು ಜನ (ಮಾದಿಮ್ಮ 8, ಬೇಡಿಕೆ 16) ಕುಲಸ್ಥರೂ ತಮ್ಮ ಇಪ್ಪತ್ತನಾಲ್ಕು ಶಿರಸ್ಸುಗಳನ್ನು ತಂದೊಪ್ಪಿಸುವ ಸಮಯದಲ್ಲಿ ಬ್ರಹ್ಮ, ವಿಷ್ಣು ರುದ್ರನೇ ಆದಿಯಾಗಿ ಸಮಸ್ತ ದೇವತೆಗಳೂ ಪ್ರತ್ಯಕ್ಷರಾದರು. ಇವರ ನಿಜಭಕ್ತಿಗೂ, ಶರಣಾಗತ ರಕ್ಷಣೆಗೂ ಮೆಚ್ಚಿ ಅವರಿಗೆ ಬೇಕಾದ ವರಗಳನ್ನು ಕೊಟ್ಟು ಅಂತರ್ಧಾನರಾದರು.

ಈ ಸಾಧುಶೆಟ್ಟರು ನಿತ್ಯಸತ್ಯವ್ರತರಾಗಿಯೂ ದೃಢ ಭಕ್ತಿಯುಳ್ಳವರಾಗಿಯೂ, ಮಲ್ಲವಿದ್ಯಾ ವಿಶಾರದರಾಗಿಯೂ, ರಣ ಭಯಂಕರರಾಗಿಯೂ ಚಪ್ಪನ್ನಾರು ದೇಶಗಳಲ್ಲಿಯೂ ತಮಗೆ ಸಾಟಿ ಇಲ್ಲವೆನ್ನಿಸಿಕೊಳ್ಳುತ್ತಿದ್ದರು ಆಗ ಆ ಚೋಳನ ರಾಜ್ಯಕ್ಕೆ ಬಿಲ್ಲಲ ಬಲ್ಲಲರಾಯನೆಂಬ ರಾಜನು ಚೋಳನ ಮೇಲೆ 24 ಲಕ್ಷ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಬರಲು ಆ ಚೋಳನು ಯುದ್ಧವಿಲ್ಲದೆ ಭಯಾಕ್ರಾಂತನಾದನು. ಚೋಳನು ರಾಜತ್ವಕ್ಕೆ ಲೋಪ ಬರುವುದೆಂಬ ಶಂಕೆಯಿಂದ ತನ್ನ ರಾಜ್ಯದ ಮಹಾವೀರಾಧಿವೀರರು ಸಭೆ ಸೇರುವಂತೆ ಡಂಗೂರ ಹೊಯಿಸಿದನು. ಆ ಮಹಾ ಸಭೆಯಲ್ಲಿ ಸಾಧುಶೆಟ್ಟರೇ ಮೊದಲಾದವರು

ನೇರಿರುವ ಸಮಯದಲ್ಲಿ ಶತ್ರು ಸೈನ್ಯವನ್ನು ನಾಶ ಮಾಡಿದವರಿಗೆ ಥವಿಲು, ಮಲಹರಿ ಭೇರಿ, ಢಕ್ಕೆ, ಶಂಖ, ಪಂಚವಾವಟಿಕೆ, ಕಂಚಿನ ಕೊಂಬುಗಳೊಂದಿಗೆ ಅರ್ಧ ರಾಜ್ಯವನ್ನು ಕೊಡುವೆನೆಂದು ಪ್ರತಿಜ್ಞೆ ಮಾಡಿದನು. ಈ ಸಾಧುಶೆಟ್ಟರು ರಾಜನ ಪ್ರತಿಜ್ಞೆಯನ್ನು ಪಾಲಿಸುತ್ತೇವೆಂದು ವಚನ ಕೊಟ್ಟು, ಅವನಿಂದ ತಾಂಬೂಲವನ್ನು ಸ್ವೀಕರಿಸಿ ಹೊರಟು ಬಂದರು. ನಂತರ ತಮ್ಮ ಕುಲದೇವತೆಯಾದ ಶ್ರೀ ಕಂಚಿಕಾಮಾಕ್ಷಿಯನ್ನು ಆರಾಧಿಸಲು ದೇವಿಯು ಪ್ರತ್ಯಕ್ಷಳಾಗಿ ಅಭಯಕೊಟ್ಟು, ಇದಕ್ಕೆ ತಂಗಡಿ ಗಿಡವನ್ನು ಒಂದು ನಿದರ್ಶನವಾಗಿ ಕೊಟ್ಟು, ಅವರನ್ನು ರಣಕ್ಕೆ ಕಳುಹಿಸಿದಳು. ಆ 24 ಜನ ಶೆಟ್ಟರು ಸಂಗ್ರಾಮ ಭೂಮಿಗೆ ಬಂದು ಧೀಮಪರಾಕ್ರಮದಿಂದ 24 ಲಕ್ಷ ವೈರಿಗಳೊಂದಿಗೆ ಹೋರಾಡಿ ಅವರನ್ನು ಅನಾಯಾಸವಾಗಿ ಸೋಲಿಸಿ ನಾಶಗೊಳಿಸಿದರು. ಆದೇ ವೈರಿಗಳ ತಲೆಗಳಿಂದ ತಮ್ಮ ಇಷ್ಟ ದೇವತೆಯಾದ ಶ್ರೀ ಕಂಚಿಕಾಮಾಕ್ಷಿಯನ್ನು ಪೂಜಿಸಲು ಆಕೆಯು ಪ್ರತ್ಯಕ್ಷವಾಗಿ ಎಲ್ಲರಿಗೂ ಆಶೀರ್ವದಿಸಿ ವಜ್ರಾಯುಧವೇ ಮೊದಲಾದ ಆಯುಧಗಳನ್ನು ಅನುಗ್ರಹಿಸಿ ಅಂತರ್ಧಾನವಾದಳು. ಚೋಳ ಭೂಪಲನು ತನ್ನ ಪ್ರತಿಜ್ಞೆಯ ಮೇರೆಗೆ ಈ 24 ಜನ ಸಾಧುಶೆಟ್ಟರಿಗೆ ಥವಿಲು, ಮಲಹರಿ, ಭೇರಿ ಢಕ್ಕೆ, ಶಂಖ, ಪಂಚಪಾವಟಿಕೆ ಕಂಚಿನಕೊಂಬು ಇವುಗಳೊಂದಿಗೆ ಅರ್ಧ ರಾಜ್ಯವನ್ನು ದಯಪಾಲಿಸಿದನು ಸಾಧುಶೆಟ್ಟರು ಈ ರೀತಿ ದೇವಿಯ ಕೃಪೆಯಿಂದ ದುಷ್ಟರನ್ನು ಶಿಕ್ಷಿಸಿ ಕರ್ತವ್ಯ ನಿರತರಾಗಿ ಸುಖವಾಗಿ ಬಾಳುತ್ತಿದ್ದರು.

ಚೋಳ ಭೂಪಾಲನು ಸಕಲ ಸಂಪತ್ತಿನಿಂದ ರಾಜ್ಯ ಪರಿಪಾಲನೆ ಮಾಡುತ್ತಿರಲು ಒಂದು ದಿನ ಮಹಾನುಭಾವನಾದ ಸಾಧುಶೆಟ್ಟರ ಮುಕ್ಕಡಿ ಬಲ್ಲುಶೆಟ್ಟಿಯನ್ನು ಕರೆಸಿ ತನ್ನ ಅರ್ಧ ಸಿಂಹಾಸನದಲ್ಲಿ ಕುಳ್ಳಿರಿಸಿ ಕನಕಾಂಬರಾದ್ಯನೇಕ ವಸ್ತ್ರಗಳಿಂದ ಸತ್ಕರಿಸಿದನು. ನಂತರ ರಾಜನು ತನಗೆ ಇವರ ಕುಲದಲ್ಲಿ ಕನ್ಯೆಯು ಬೇಕೆಂದು ತಿಳಿಸಿದನು. ಆದಕ್ಕೆ ಬಲ್ಲುಶೆಟ್ಟಿಯು ತಮ್ಮ ಹಿರಿಯರಾದ ಭಾಂಧವರನ್ನು ವಿಚಾರಿಸಿ ಉತ್ತರ ಕೊಡುವೆನೆಂದು ತಿಳಿಸಿ ಹೊರಟು ಬಂದನು. ಈ ಸಂಗತಿಯನ್ನು ತಿಳಿದ ಕುಲಸ್ಥರು ಕೋಪೋದೀಪಿತರಾಗಿ ಕನ್ಯೆಯನ್ನು ಕೊಡಲಾಗದೆಂದೂ, ರಾಜನ ಗರ್ವವನ್ನು ಮುರಿಯಲು ನೀನೊಬ್ಬನೇ ಸಾಕೆಂದೂ ಬಲ್ಲುಶೆಟ್ಟಿಗೆ ತಿಳಿಸಲು ಆದೇ ಪ್ರಕಾರ ಬಲ್ಲುಶೆಟ್ಟಿಯು ರಾಜನಿಗೆ ಕನ್ಯೆಯನ್ನು ಕೊಡಲಾಗುವುದಿಲ್ಲವೆಂದು ಹೇಳಿದನು. ಈ ತಿರಸ್ಕಾರದ ಮಾತನ್ನು ರಾಜನು ಕೇಳಿ ರೋಷ ಹೊಂದಲು,

ಆತನ ಮಂತ್ರಿಯು ಶಾಂತವಾದ ಮಾತುಗಳಿಂದ ರಾಜನನ್ನು ಒಡಂಬಡಿಸಿ ಉಪಾಯಾಂತರದಿಂದ ಕಾರ್ಯವನ್ನು ಸಾಧಿಸಬೇಕೆಂದು ಸಮಾಧಾನ ಮಾಡಿದನು. ಇದಕ್ಕಾಗಿ ಒಂದು ಗಂಗಾಜಾತ್ರೆಯನ್ನು ಏರ್ಪಾಡಿಸಬೇಕೆಂದೂ, ಅಲ್ಲಿ ಕಂಚಿ ಕಾಮಾಕ್ಷಿಯ ದೇವಾಲಯದಲ್ಲಿ ಕುರಿ ಕೋಣಗಳನ್ನು ಕಡಿಯುವುದರ ಮೂಲಕ ಅಶುಚಿ ಮಾಡುವುದಾದರೆ ದೇವಿಯು ಆ ಸ್ಥಳವನ್ನು ಬಿಟ್ಟು ಹೋಗಿ ಬಿಡುವುದರಿಂದ ಈ ಸಾಧು ಶೆಟ್ಟರ ಬಲವು ಬಿದ್ದು ಹೋಗುವುದೆಂದೂ ತದ ನಂತರ ಯಾವ ಕಾರ್ಯವನ್ನು ಬೇಕಾದರೂ ಸಾಧಿಸಬಹುದೆಂದೂ ಸಲಹೆಕೊಟ್ಟನು. ಇದಕ್ಕೆ ರಾಜನೂ ಒಪ್ಪಿ ಸಮ್ಮತಿ ಸೂಚಿಸಿದನು. ಕೆಲವು ದಿನಗಳಲ್ಲಿಯೇ ಜಾತ್ರೆಯು ಏರ್ಪಾಡಾಯಿತು. ದೇವಿಯ ದೇವಾಲಯದಲ್ಲಿ ಅಶುಚಿಯನ್ನು ಮಾಡಿ ಬಿಟ್ಟರು. ಇದರಿಂದ ದೇವಿಯು ಕೇವಲ ಕೋಪಗೊಂಡು ಇದನ್ನೇರ್ಪಾಡು ಮಾಡಿದವರೇ ಆಕ್ಷಣದಲ್ಲಿ ನಾಶವಾಗುವಂತೆ ಮಾಡಿದಳು. ಈ ವೃತ್ತಾಂತವನ್ನು ರಾಜನು ತಿಳಿದು ಸಾಧುಶೆಟ್ಟರಿಗೆ ಶರಣಾಗತನಾದನು. ಉಪಾಯಾಂತರದಿಂದ ತಮ್ಮ ವಂಚಿಸಬೇಕೆಂದು ಆಲೋಚಿಸಿ ದುಷ್ಕಾರ್ಯವೆಸಗಿ ಕೃತಕೃತ್ಯನಾಗದ ಈ ರಾಜನನ್ನು ಹೇಗಾದರೂ ವಂಚಿಸಬೇಕೆಂದು ಸಾಧುಶೆಟ್ಟರು ಆಲೋಚಿಸಿ ಕೊನೆಯಲ್ಲಿ ತಮ್ಮ ಕನ್ಯೆಯನ್ನು ಕೊಡಲು ಒಪ್ಪಿದರು. ಆಗ ರಾಜನು ಸಾಧುಶೆಟ್ಟರನ್ನು ಸಕಲ ಸನ್ಮಾನಗಳಿಂದ ಸಂತುಷ್ಟಪಡಿಸಿ, ತಾಂಬೂಲಾದಿಗಳನ್ನು ಕೊಟ್ಟು ಕಳುಹಿಸಿದನು ಶುಭದಿವಸ, ಶುಭ ತಿಥಿ, ಶುಭ ನಕ್ಷತ್ರದಲ್ಲಿ ವೇದೋಕ್ತ ವಿಧಿಯಂತೆ ವಿವಾಹವು ಗುರುಹಿರಿಯರ ಸಾನ್ನಿಧ್ಯದಲ್ಲಿ ಬಂಧು ಬಾಂಧವರ ಸಹಿತ ನೆರವೇರಿತು. ವರನು ಅವಕುಂಠನ ಹಾಕಿದ ವಧುವಿಗೆ ಮಾಂಗಲ್ಯಧಾರಣೆ ಮಾಡಿದನು. ಚತುರ್ವರ್ಣದವರಿಗೂ ಸುಬವಿಟಾಗಂತುಕವಂದಿ ಮಾಗಧರಿಗೂ ಅವರವರ ಯೋಗ್ಯತಾಪ್ರಕಾರ ಸನ್ಮಾನ ಮಾಡಿದನು ಮದುವೆ ಮುಗಿಯಿತು. ವಧುವನ್ನು ವರನ ಮನೆಗೆ ತಂದುಬಿಟ್ಟರು. ರಾಜನು ಆನಂದದಿಂದ ಮೈಮರೆತು ಅವಕುಂಠನವತಿಯಾದ ಆ ರಮಣಿಯ ಹಸ್ತವನ್ನು ಹಿಡಿದು ಎಳೆದನು ಹಸ್ತವನ್ನು ಎಳೆದ ಮಾತ್ರಕ್ಕೆ ತೋಳು ದೇಹದಿಂದ ಕಳಚಿಬಿದ್ದು, ಒಳಗಿದ್ದ ರತ್ನ ರಾಶಿಗಳೆಲ್ಲಾ ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡವು. ರಾಜನು ವಿಸ್ಮಿತನಾದನು

ಸಾಧುಶೆಟ್ಟರ ಯುಕ್ತಿಯು ಹೊರಬಿದ್ದಿತು; ಶೆಟ್ಟರು ಅಂದಚಂದದ ಒಂದು ಕನಕ ಪ್ರತಿಮೆಯನ್ನು ಶೃಂಗರಿಸಿ ರಾಜನ ಪ್ರಾಸಾದದಲ್ಲಿ ಇಟ್ಟು ಬಂದಿದ್ದರು;. ಇದನ್ನು ತಿಳಿದು ಕೋಪೋದ್ದೀಪಿತನಾಗಿ ಶೆಟ್ಟರಿಗೆ ಶಾಪವನ್ನು ಕೊಟ್ಟನು '' ನಿಮ್ಮಲ್ಲಿ ಕನಕವು ಕಡಿಮೆಯಾಗಲಿ, ಸುಂದರಿಯು ಸಹಿತ ಇಲ್ಲದೇ ಹೋಗಲಿ '' ಎಂದು ಶಪಿಸಿದನು.

ಬಲ್ಲರ ಸಂತತಿಯಲ್ಲಿ ಹುಟ್ಟಿದವನಾದ ಕುರುಬೇಂದ್ರನೆಂಬ ರಾಜನು ಮಹಾ ಕ್ರೂರನಾಗಿ ಕಾಂಚಿಯಲ್ಲಿ ಬಹಳ ತೊಂದರೆಯನ್ನು ಕೊಡುತ್ತಿರಲು, ಕಾಂಚೀ ಪಟ್ಟಣದ ದೊರೆಯಾದ ಚೋಳನು ತನ್ನ ಸರಿಸಮಾನಸ್ಕಂಧರಾದ ಸಾಧುಶೆಟ್ಟರನ್ನು ಮೊರೆಹೊಕ್ಕು, ಕುರುಬೇಂದ್ರನ ಆಕ್ರಮಣವಾದ ಕ್ರೂರಯಾತನೆಗಳಿಂದ ತನ್ನನ್ನೂ ತನ್ನ ರಾಜ್ಯವನ್ನೂ ಪಾರು ಮಾಡಬೇಕೆಂದು ಕೇಳಿಕೊಂಡನು. ಆಗ ಸಾಧುಶೆಟ್ಟರು ದೈವಬಲದಿಂದ ಆ ದುಷ್ಟ ರಾಜ ಕುರುಬೇಂದ್ರನ ಬಾಹುಬಲವನ್ನೂ ಸೈನ್ಯಬಲವನ್ನೂ ಭಂಗಪಡಿಸಿ, ಪಂಚಬಿರುದುಗಳನ್ನು ಚೋಳ ರಾಜನಿಂದ ಪಡೆದರಲ್ಲದೆ ತಮ್ಮ ಇಷ್ಟದೇವತೆಯಾದ ಶ್ರೀ ಕಂಚಿಕಾಮಾಕ್ಷಿ ದೇವಿಯ ಪೂರ್ಣಾನುರಾಗಕ್ಕೆ ಪಾತ್ರರಾದರು. ಈ ಸಮಯದಲ್ಲಿ ಋಷಿಗಳು ಬಂದು ಆನಂದಪಟ್ಟು '' ನಮ್ಮ ಹೆಸರಿನ ಗೋತ್ರಗಳು ನಿಮಗೆ ಇರಲಿ '' ಎಂದು ಆಶೀರ್ವದಿಸಿದರು. (ಶ್ರೀ ಕೆ.ಸಿ. ದೊತ್ತಣ್ಣ, ಕಂಚಿ, ತಾಮ್ರ ಶಾಸನಾಧಾರ).

## 2.3. ತೆಲುಗ ಬಣಜಿಗ ಶೆಟ್ಟರ ಜನಾಂಗ :

ಹಾವನೂರ್ ವರದಿ ತೆಲುಗ ಬಣಜಿಗ ಶೆಟ್ಟರ ಜನಾಂಗವನ್ನು 'ಬಳಜ' ಎನ್ನುವ ಗುಂಪಿಗೆ ಸೇರಿಸಿ ಹಿಂದುಳಿದ ವರ್ಗವೆಂದು ಗುರುತಿಸಿದಕ್ಕೆ ಪ್ರತಿಭಟನೆಯಾಗಿ ಈ ಮೇಲ್ಕಂಡ ಹೆಸರಿನ ಕರಪತ್ರವನ್ನು ಅಚ್ಚಾಕಿಸಿತು. ಇದರ ರಾಜಕೀಯ ಕಾರಣಗಳು ಏನೇ ಇರಲಿ ಇವರು ಕರ್ನಾಟಕದಲ್ಲಿ ತೆಲುಗು ಮಾತಾಡುವ ಮತ್ತೊಂದು ಪಂಗಡ ಎಂಬುದು ಗೊತ್ತಾಗುತ್ತದೆ. ಈ ತರದ ರಾಜಕೀಯ ಕಾರಣಗಳಿಂದ ಇವರು ಮೊಟ್ಟ ಮೊದಲು ಇತಿಹಾಸದ ಮಾತುಗಳನ್ನು ಅಡಿ ಮುದ್ರಿಸಿದ್ದು ಬಹಳ ಮುಖ್ಯವಾದ ಸಂಗತಿ ಎನ್ನುವ ಕಾರಣದಿಂದ ಉಲ್ಲೇಖಿಸಿದ್ದೇನೆ. ಇವರ ಆತಂಕ ಅಲ್ಪ-ಸಂಖ್ಯಾತರೆಂದು, ಹಿಂದುಳಿದವರೆಂದು ಗುರುತಿಸಿದರೆ ನಮಗೆ ಸಾಮಾಜಿಕ ಮನ್ನಣೆ ಸಿಗುವುದಿಲ್ಲ ಎಂಬ ಪೂರ್ವಗ್ರಹದಿಂದ ಕೂಡಿದ್ದು ಇವರ ಮಾಹಿತಿ ಹೀಗೆ '' ನಾವು (ಆಂಧ್ರ ಕ್ಷತ್ರಿಯರು) ತೆಲುಗು ಬಣಜಿಗ ಶೆಟ್ಟರೆಂದು ನಮ್ಮ ಮಾತೃಭಾಷೆ ತೆಲುಗೆಂದೂ ನಮ್ಮ ಮೂಲಸ್ಥಾನ ಆಂಧ್ರ ಪ್ರದೇಶ ಈಗಿನ 'ಹಂಪೆ' ಯ ಸುತ್ತ-ಮುತ್ತಲಿನ ಪ್ರದೇಶವೆಂದೂ ನಾವು ವಿಜಯನಗರದರಸರ ಕಾಲದಲ್ಲಿ (ಅಂದರೆ 15 – 16ನೇ ಶತಮಾನದಲ್ಲಿ) ಪ್ರವರ್ಧರಾಗಿದ್ದೆವೆಂದೂ ಕ್ರಮೇಣ ಕನ್ನಡ ಸೀಮೆಯಾಗಿದ್ದ ಮೈಸೂರು ದೇಶಕ್ಕೆ ಕ್ರಿ.ಶ. 1495ರಲ್ಲಿ ವಲಸೆ ಬಂದೆವೆಂದು ನಮ್ಮ ಹಿರಿಯರನೇಕರಿಂದ ಕೇಳಿ ತಿಳಿದಿರುತ್ತೇವೆ... (ವಿ.ಎಸ್.ಜೀರ್ವ, ಮೈಸೂರು ಅರಮನೆಯ ನಿವೃತ್ತ ಮೊಖ್ತೇಸರು, ಮೈಸೂರು). ಶ್ರೀರಂಗಪಟ್ಟಣ, ಮೈಸೂರು, ಮಂಡ್ಯ, ಚನ್ನಪಟ್ಟಣ, ಕೊಳ್ಳೇಗಾಲ, ನಂಜನಗೂಡು, ಗುಂಡ್ಲುಪೇಟೆ, ಸಾಲಿಗ್ರಾಮ, ನರಸೀಪುರ, ಗ್ರಾಮಗಳು ಇವರ ಪೂರ್ವದ ಊರುಗಳಾಗಿವೆ. ನನ್ನ ಅಧ್ಯಯನದ ಜನಾಂಗಕ್ಕೂ ಮೇಲಿನ ಜನಾಂಗಕ್ಕೂ ಯಾವುದೇ ಕೊಡುವ – ತರುವ ಸಂಬಂಧವಾಗಲೀ,

ವಂಶಾವಳಿಗಳ ಹೊಂದಾಣಿಕೆಯಂತೂ ಆಗಲೀ ಇಲ್ಲ. ಆದರೆ 'ತುಳುವ ಬಣಜಿಗ ಶೆಟ್ಟರ' ರು ಆಂಧ್ರ ಮೂಲದಿಂದ ಬಂದದ್ದು ವ್ಯಾಪಾರವನ್ನು ವೃತ್ತಿಯಂತಾಗಿ ಮಾಡಿಕೊಂಡಿದ್ದು ಕಾಣುತ್ತೇವೆ. ಇದು 24 ಮನೆ ತೆಲುಗುಶೆಟ್ಟಿ ಜನಾಂಗದಲ್ಲೂ ಕಾಣುತ್ತೇವೆ. ಆಂಧ್ರದಿಂದ ವ್ಯಾಪಾರದ ಉದ್ದೇಶದಿಂದ ಪಂಗಡ – ಪಂಗಡವಾಗಿ ಬಂದು ಕರ್ನಾಟಕ ಸೇರಿದ ಜನಾಂಗಗಳಲ್ಲಿ ಇದು ಒಂದು ಎಂಬುದಷ್ಟೇ ಇಲ್ಲಿ ಮುಖ್ಯವಾಗಿದೆ.

## 3.4. ಶಾಸನಗಳಲ್ಲಿ ಜನಾಂಗದ ಮೂಲಕ್ಕೆ ಸಂಬಂಧಿಸಿದ ವಿಚಾರಗಳು

'ತೆಲುಗ' ಎನ್ನುವ ಪದ ಹಾಗೂ ಈ ಜನಾಂಗದ ಮನೆ ಮಾತು ತೆಲುಗು ಆದ್ದರಿಂದ ಇವೆರಡು ಅಂಶಗಳು ಆಂಧ್ರ ಮೂಲವನ್ನು ಪ್ರತಿನಿಧಿಸುವುದು ಸರಿಯಷ್ಟೆ. ಅಲ್ಲದೆ ತಮಿಳುನಾಡಿನಲ್ಲಿರುವ '24 ಮನೆ ತೆಲುಗು ಚೆಟ್ಟಿಗಳು' ಮನೆಮಾತು ತಮಿಳೇ ಆಗಿದೆ. ಈ ಹಿನ್ನಲೆಯಲ್ಲಿ 'ತೆಲುಗ' ಎನ್ನುವ ಪದದ ಇನ್ನಿತರ ಅರ್ಥದ ಕಡೆ ಗಮನ ಹರಿಸಬೇಕಾಗುತ್ತದೆ. ಗಾಣಗಳಲ್ಲಿ ಉತ್ಪಾದಿಸಿದ ಎಣ್ಣೆಯನ್ನು ಕೊಡ ಚರ್ಮದ ಚೀಲ (ಹಿ.ಕ.ಸ್ವ. ಅ.ಬ.ನಂ.72, ಬಸವ ಕಲ್ಯಾಣ. ಕ್ರಿ.ಶ.1143) ಗಳಲ್ಲಿ ತುಂಬಿ ಪ್ರಾಣಿಗಳ ತಲೆ ಹೆಗಲ ಮೇಲಿಟ್ಟುಕೊಂಡೋ ಅಥವಾ ಬಂಡಿಗಳ ಮೂಲಕವೋ ಸಂತೆದಿನ ಹಾಗೂ ಪ್ರತಿದಿನ ಮಾರಾಟ ಮಾಡುತ್ತಿದ್ದರು. ಆದ್ದರಿಂದ ಶಾಸನಗಳಲ್ಲಿ ತೆಲ್ಲಿಗ ಸೆಟ್ಟಿ (ಕ.ಇ.ವಿ.20 ಬಾಳೂರು(ತಾ) ಹಾನಗಲ್ಲು.ಕ್ರಿ.ಶ. 1125) ಅಂತುತೊತ್ತಕ್ಕಲ ಸೆಟ್ಟಿಯರೆಂದು ಇವರನ್ನು ಕರೆದಿವೆ.(ಹಿರೇಮಠ ಬಿ.ಆರ್. 106.1989).

ತೈಲವನ್ನು ಮಾರುವವರಾದ್ದರಿಂದ ತೆಲ್ಲಿಗರು(ಸಂ.ತೈಲಕ) ಎನ್ನುವ ಪದ ಬಂದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಾಗೆ ಮೈಸೂರು ಜಿಲ್ಲೆಯ ಪ್ರಸ್ತುತ ಜನಾಂಗದ ಪೂರ್ವಿಕರು ಎಣ್ಣೆ ಮಾರುವ ವೃತ್ತಿಯನ್ನು ಕಳೆದ ಶತಮಾನದವರೆಗೂ ಇಟ್ಟುಕೊಂಡಿದ್ದರು ಎಂದು ಶ್ರೀ ರಾಮಕೃಷ್ಣ ಶೆಟ್ಟಿ ದೊಡ್ಡಿಂದುವಾಡಿಯವರು ಅಭಿಪ್ರಾಯ ಪಡುತ್ತಾರೆ.(ಇವರ ಅಜ್ಜಿಯ ಹೆಸರು ಎಣ್ಣೆ ಬಿಣ್ಣಮ್ಮ).

ಈ ಆಧಾರದ ಮೇಲೆ ಎರಡು ಸಂಗತಿಗಳು ಸ್ಪಷ್ಟವಾಗುತ್ತದೆ.

ಒಂದು: ಇವರು ಆಂಧ್ರ ಮೂಲವನ್ನು ಪ್ರತಿನಿಧಿಸುವುದು,

ಎರಡು: ತಮಿಳುನಾಡು — ಕರ್ನಾಟಕದಲ್ಲೇ 'ತೆಲ್ಲಗ' ಎನ್ನುವ ಹೆಸರಿನ ಜನಾಂಗವಿತ್ತು, ಎಂಬುದು. ಆಂಧ್ರದಿಂದ ವಲಸೆ ಬಂದ ಜನಾಂಗ ನೆಲೆಗೊಂಡ ಸಂಸ್ಕೃತಿಯೊಡನೆ ಕೊಡುವ — ತರುವ ಸಂಬಂಧ ಬೆಳೆಸಿರಬಹುದು. ಇದಕ್ಕೆ ಪೂರಕವಾಗಿ ಇವರ ದಂಡಿನಕತೆ, ಬೆಳ್ಳಾಳಗಿತ್ತಿ, ವೇಷ, ಜಾತಿ ಸಂಕರವನ್ನು ಪ್ರತಿನಿಧಿಸುತ್ತವೆ. ಈ ಅರ್ಥದಲ್ಲಿ 'ತೆಲುಗ' ಎನ್ನುವ ಪದ ಆಂಧ್ರಮೂಲವನ್ನು, 'ತೈಲ ವ್ಯಾಪಾರ ಮಾಡುವವ' ಎನ್ನುವ ಎರಡು ಅರ್ಥಗಳನ್ನು ಮೇಳೈಸಿಕೊಂಡಿರುವ ಸಾಧ್ಯತೆಯಿದೆ.

## 3. ಬಳಿಗಳು ಮತ್ತು ಕೂಡುವ – ತರುವ ಸಂಬಂಧ

ಮದುವೆಯ ಮೊದಲ ಹಂತ ಆರಂಭವಾಗುವುದು 'ಬಳಿ' ಯ ಆಯ್ಕೆಯಲ್ಲಿ 24 ಮನೆ ಎನ್ನುವುದು 24 ವಂಶಗಳನ್ನು ಸೂಚಿಸುತ್ತದೆ. ಈ 24 ವಂಶಗಳನ್ನು 16 ಮನೆಯವರು, 8 ಮನೆಯವರು, ಎಂದು ವಿಭಾಗಿಸಿ ಕೊಂಡಿದ್ದಾರೆ. 16 ಮನೆಯವರನ್ನು ಪುರುಷ ಸಂತತಿಯವರೆಂದು 8 ಮನೆಯವರನ್ನು ಸ್ತ್ರೀ ಸಂತತಿಯವರೆಂದು ವಿಂಗಡಿಸಿಕೊಂಡು ಕೂಡುವ ತರುವ ಸಂಬಂಧವಿಟ್ಟು ಕೊಂಡಿದ್ದಾರೆ.

| ಪುರುಷ ಪರಂಪರೆ | ಸ್ತ್ರೀ ಸಂತತಿ |
|---|---|
| 1. ಮುಮ್ಮಡಿವಾರು | 1. ಕೊಲವಾರು |
| 2. ಪಿಡುಗುವಾರು | 2. ಕವಲವಾರು |
| 3. ಪಲ್ಲವಾರು | 3. ಮೊವಿಟ್ಟವಾರು |
| 4. ನೆರಮುಕ್ಕಡಿವಾರು | 4. ಮುಕ್ಕಡವಾರು |
| 5. ರಜ್ಜವಾರು | 5. ರವಿಳವಾರು |
| 6. ಗಂಧಿವಂಗರವಾರು | 6. ಬಲ್ಲವಂಗರವಾರು |
| 7. ಕೊಟ್ಟವಾರು | 7. ದೊಲ್ಲವಾರು |
| 8. ಗಣಿತವಾರು | 8. ಅರುವಾರು |
| 9. ಬಟ್ಟವಾರು | |
| 10. ಮೊರಟ್ಟವಾರು | |
| 11. ಕೈರವಾರು | |
| 12. ವಾಜಲುವಾರು | |
| 13. ಮದಲ್ಲವಾರು | |
| 14. ಲಕ್ಕವಾರು | |
| 15. ಪಲಬಿಧುವಾರು | |
| 16. ರಾಯಲವಾರು | |

(ಉಮಾಪತಿ 1979)

(ಶ್ರೀ ಸಾಧುಚೆಟ್ಟಿ ನಂವ್ರ)

ಮೇಲ್ಕಂಡ ವಂಶಾವಳಿಗಳ ವರ್ಗೀಕರಣ ಶಿವಮೊಗ್ಗ ಜಿಲ್ಲೆಯಲ್ಲಿ ವಾಸವಾಗಿರುವ ಶ್ರೀ ಸಾಧುಶೆಟ್ಟಿ (24ಮನೆ ಶೆಟ್ಟಿಯಾರ್ ಎಂದು ಬರೆದುಕೊಂಡಿದ್ದಾರೆ) ಸಂಘದವರು 1979 ರಲ್ಲಿ ಅಚ್ಚಾಕಿಸಿದ ಒಂದು ಕಿರು ಹೊತ್ತಿಗೆಯಲ್ಲಿ ದೊರಕಿದೆ.

ಆದರೆ ಪ್ರಸ್ತುತ ಅಧ್ಯಯನದ ಜನಾಂಗವಾದ 'ಮೈಸೂರು ಜಿಲ್ಲೆಯ 24 ಮನೆ ತೆಲುಗುಶೆಟ್ಟರೂ ಹದಿನಾರು ಮನೆ ಮತ್ತು ಎಂಟುಮನೆ ಪುರುಷ ಸ್ತ್ರೀ ಸಂತತಿಯನ್ನು ಒಪ್ಪಿಕೊಂಡರು ಇವರು ಕರ್ನಾಟಕದಲ್ಲಿ ಈಗ ಇರುವ ವಂಶಾವಳಿಗಳನ್ನು ಈ ಕೆಳಕಂಡಂತೆ ಹೆಸರಿಸಿದ್ದಾರೆ.

1. ಬೊಮ್ಮನವಾರು
2. [illegible]ಲವಾರು
3. ಪುರಬಿವಾರು
4. ಸಿದ್ದಂಶೆಟ್ಟಿ ವಂಶ
5. ಪಾಜುಲಾರು (ಪೂಜಾರಿ ವಂಶ)
6. ಪುಕ್ಕರ್ಲಾರು
7. ಮುರಮಳ್ಳಿವಾರು
8. ಮುದುಕಾಳಿವಂಶ

(ಕಳಲೆ ಶ್ರೀ ವೆಂಕಟರಮಣ ಶೆಟ್ಟಿ)

ಹೀಗೆ ಎಂಟು ವಂಶಗಳು ಮಾತ್ರ ಕಂಡು ಬರುತ್ತವೆ. 'ಮುದುಕಾಳಿ' ಮತ್ತು ಪುರಬಿ ವಂಶಗಳು 24 ಮ ನೆ ವಂಶಾವಳಿಗಳಲ್ಲಿ ಕಂಡು ಬರುವುದಿಲ್ಲ. ಈ ಹೆಸರುಗಳು ಕಾಲಾಂತರದಲ್ಲಿ ಬದಲಾದವೋ ಅಥವಾ ಹೊಸ ಸೇರ್ಪಡೆಯೋ ಎಂಬುದು ಸದ್ಯಕ್ಕೆ ಗೋಚರವಾಗುತ್ತಿಲ್ಲ. ಈಗ ಇರುವ ಎಂಟು ವಂಶಗಳಲ್ಲಿ ಸ್ತ್ರೀ ಪುರುಷ ವಂಶಾವಳಿಗಳಲ್ಲಿ ಈ ಕೆಳಕಂಡಂತೆ ವಿಭಾಗಿಸಿಕೊಂಡಿದ್ದಾರೆ.

| | | |
|---|---|---|
| ಬೊಮ್ಮನ ವಾರು | ¦ | ದಾಳಿ |
| ಪುರಟವಾರು | ¦ | ಪೂಜಾರಿ |
| ಪುಕ್ಕರಾಲ್ಲರು | ¦ | ಸಿದಾಂಶೆಟ್ಟಿ |
| ಮುಮ್ಮಡಿವಾರು | ¦ | |
| ಮುದುಕಾಳಿ ವಂಶ | ¦ | |

ಈ ಎರಡು ಭಾಗಗಳಲ್ಲಿ ಪುರುಷ ಸಂತತಿಯಾದವರು, ಸ್ತ್ರೀ ಸಂತತಿಯಾದವರು ಎಂಬುದು ಖಚಿತವಾಗಿ ತಿಳಿಸಿಲ್ಲ. ಒಟ್ಟಾರೆ ಈ ವಿಭಾಗೀಕರಣದ ಮೇರೆಗೆ ಕೊಡುವ ತರುವ ಪದ್ಧತಿ ಬೆಳೆದು ಬಂದಿದೆ.

ಶಿವಮೊಗ್ಗ ಜಿಲ್ಲೆಯ ಸಾಧುಶೆಟ್ಟಿ ಜನಾಂಗದೊಡನೆ ಈ ಜನಾಂಗದವರು ಕೊಡು — ತರುವ ಸಂಬಂಧವನ್ನು ಬೆಳೆಸಿಕೊಂಡಿಲ್ಲ. ಹಾಗೆ ತಮಿಳುನಾಡಿನ 24 ಮನೆ ತೆಲುಗು ಚೆಟ್ಟಿಯಾರ್‌ಗಳಲ್ಲಿ ಕಳೆದ ವರ್ಷದ ತನಕ ಕೊಡುವ — ತರುವ ಸಂಬಂಧವಿರಲಿಲ್ಲ. ಇತ್ತೀಚೆಗೆ 1991 ರಲ್ಲಿ ಮುಂಬಯಿಯ ಚಿನ್ನಸ್ವಾಮಿ ಶೆಟ್ಟಿ ಎನ್ನುವವರು ಮಾತ್ರ ತಮಿಳುನಾಡಿನ 24 ಮನೆ ತೆಲುಗು ಚೆಟ್ಟಿಯಾರ್ ಜನಾಂಗದ ಒಬ್ಬ ವರನಿಗೆ ತಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿ ಹೊಸ ಸಂಬಂಧ ಬೆಳೆಸಿಕೊಂಡಿದ್ದಾರೆ.

ಈ ಎಲ್ಲ ಸಂಗತಿಗಳಿಂದ ತಿಳಿದು ಬರುವ ಅಂಶವೆಂದರೆ ವಿವಿಧ ಕಾಲ ಘಟ್ಟಗಳಲ್ಲಿ ಆಂಧ್ರ, ತಮಿಳುನಾಡಿನಿಂದ ವಲಸೆ ಬಂದ ಈ ಜನಾಂಗ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ನೆಲೆಗೊಂಡಿರಬಹುದು. ತಮ್ಮ ಮೂಲ ಸಂಸ್ಕೃತಿ, ನೆಲಗೊಂಡ ಸಂಸ್ಕೃತಿಯೊಡನೆ ಬೆರೆತು ಕೆಲವು ಆಚಾರ — ವಿಚಾರಗಳು ಬದಲಾಗಿರಬಹುದು ಅಥವಾ ಸೇರ್ಪಡೆಯಾಗಿರಬಹುದು. ಆದ್ದರಿಂದ ತಮಿಳುನಾಡಿನಲ್ಲಿ ಕಾಣಿಸಿಕೊಳ್ಳುವ ಕೆಲವು ವಂಶದ ಹೆಸರುಗಳು ಕರ್ನಾಟಕದಲ್ಲಿ ಮೈಸೂರು ಜಿಲ್ಲೆಯವರಲ್ಲಿ ಕಾಣಿಸಿಕೊಂಡಿದೆ. ಮೈಸೂರು ಜಿಲ್ಲೆಯವರಲ್ಲಿ ಕಾಣಿಸಿಕೊಳ್ಳುವ ವಂಶಗಳು ಶಿವಮೊಗ್ಗ ಜಿಲ್ಲೆಯವರ ವಂಶಾವಳಿಗಳಲ್ಲಿ ಕಾಣಿಸಿಕೊಂಡಿದೆ.

## 3.1: ಶಾಸನಗಳಲ್ಲಿ ವಂಶಾವಳಿಗೆ ಸಂಬಂಧಿಸಿದ ವಿಚಾರಗಳು

ಉಂಡಿಗೆಯ ಅಧಿಕಾರವನ್ನು ವಹಿಸಿದ ಅಧಿಕಾರಿಗೆ 'ದಡಿಶೆಟ್ಟಿ' ಎನ್ನುವ ಹೆಸರಿತ್ತು. ಶಾಸನ ಉಲ್ಲೇಖ: ಎ.ಕ.2 ಶ್ರವಣಬೆಳಗೊಳ 208. ಕ್ರಿ.ಶ.1138 (ಹಿರೇಮಠ ಬಿ.ಆರ್. ಪು: 18. 1986) ಇವರು ಆ ಕಾಲದ ಗೌರವ ಯೋಗ್ಯ ವರ್ತಕರು ಈ ದಡಿಶೆಟ್ಟಿ ದೌಲ ವಂಶದ ಮೂಲ ಪುರುಷನೆ ಎಂಬ ಕುತೂಹಲಕ್ಕೆ ದಾರಿ ಮಾಡಿಕೊಡುತ್ತದೆ. ಹಾಗೆ 'ಬೊಮ್ಮಯ್ಯ' ಎನ್ನುವ ಪದ ದೊಡ್ಡ ದರ್ಜೆಯ ಹಾಗೂ ಪ್ರಾಂತೀಯ ವರ್ತಕರೆಂಬರ್ಥದಲ್ಲಿದೆ. ಶಾಸನ ಉಲ್ಲೇಖ: ಎ.ಕ 7, ಶಿಕಾರಿಪುರ. 273 ಮಾಯತವ್ವನ ಮಡ್ಡಿ, ಕಾಲ ಸೂಚಿಸಿಲ್ಲ. (ಹಿರೇಮಠ ಬಿ.ಆರ್-ಪು 18, 1986) ಈ 'ಬೊಮ್ಮಯ್ಯ' ಬೊಮ್ಮಣ್ಣನವರು ವಂಶದ ಮೂಲ ಪುರುಷನೇ ಎಂಬುದರ ಕಡೆ ಸಂಶೋಧಿಸಬೇಕಾಗಿದೆ.

ಹಾಗೆ ಶಾಸನಗಳಲ್ಲಿ ಬಳಕೆಯಾಗುವ ಮತ್ತೊಂದು ಪದ ''ಮುಮ್ಮುರಿ ದಂಡ'' ಮಧ್ಯಕಾಲೀನ ಕರ್ನಾಟಕದ ಪ್ರಮುಖ ವರ್ತಕ ಪ್ರಕಾರವಿದು. ಕೆಲು ರಾಜನ ಪ್ರಕಾರ 'ಮುಮ್ಮರಿ' ಪದಕ್ಕೆ ಕಾಸಿದ ಮಳಲು ಎಂಬರ್ಥ ಈ ಅರ್ಥದ ಜಾಡನ್ನು ಹಿಡಿದು ಮುಮ್ಮುರಿದಂಡ ವ್ಯಾಪಾರಿಗಳ ಸೈನ್ಯವೆಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. (ಹಿರೇಮಠ ಬಿ.ಆರ್. ಪು: 1986) 'ದಂಡ' ಎನ್ನುವ ಪದವನ್ನು ಡಾ: ಚಿದಾನಂದ ಮೂರ್ತಿಯವರು 'ತಂಡ' ಎಂದು ಪರಿಭಾಷಿಸಿದ್ದಾರೆ (ಚಿದಾನಂದಮೂರ್ತಿ ಪು: 380, 1970 ) ಬಿ.ಆರ್.ಹಿರೇಮಠ ಅವರು ಇದನ್ನು ಒಪ್ಪದೆ 'ಮೂರು ಮರಿಗೆಯ ದಂಡ ಎಂದರ್ಥವಾಗಬಹುದು ಎನ್ನುತ್ತಾರೆ. ಆದರೆ ಮುಮ್ಮುರಿ ದಂಡಕ್ಕೆ 'ಸೈನ್ಯ' ತಂಡ ಎನ್ನುವ ಅರ್ಥವೇ ಹೆಚ್ಚು ಸೂಕ್ತವಾದದ್ದು. ವರ್ತಕ ವ್ಯಾಪಾರಿಗಳು ದಂಡಿಗೆ ಹೋಗುತ್ತಿದ್ದರು ಎನ್ನುವುದಕ್ಕೆ ಅನೇಕ ಜನಪದ ಕತೆಗಳು ದಾಖಲೆಯಾಗಿವೆ. ಆದ್ದರಿಂದ ಸೈನ್ಯವನ್ನು ಹೊಂದಿದ್ದ 'ಮುಮ್ಮುರಿ ದಂಡ' ಎನ್ನುವ ಪದದಿಂದ 'ಮುಮ್ಮುಡಿ' ಎಂಬ ಪದ ಬಂದಿದೆಯೇ ವಿವೇಚಿಸಬಹುದಾಗಿದೆ. ಈ ಅರ್ಥದಲ್ಲಿ ಇವರ ವಂಶಾವಳಿಯನ್ನು ಸೂಚಿಸುವ ಪದಗಳು ವೃತ್ತಿ ಸೂಚಕ ಪದಗಳಾಗಿಯೂ, ವ್ಯಕ್ತಿ ಸೂಚಕ ಪದಗಳಾಗಿಯೂ ಕಂಡು ಬರುತ್ತವೆ.

ಶಿವಮೊಗ್ಗ ಜಿಲ್ಲೆಯ 'ಶ್ರೀ ಸಾಧುಶೆಟ್ಟಿ ಜನಾಂಗ'ದ ಸಂಘದವರು ಈ ವಂಶಾವಳಿಗಳಲ್ಲಿ ಬರುವ ಹೆಸರುಗಳನ್ನೆಲ್ಲಾ ವ್ಯಕ್ತಿ ಸೂಚಕ ಪದಗಳಾಗಿ ಮಾತ್ರ ಬಳಸಿ ನಂತರ ಆ ವ್ಯಕ್ತಿಗಳಿಗೆಲ್ಲಾ ಋಷಿ ಮೂಲವನ್ನು ಹುಡುಕಿ ಗೋತ್ರಗಳಾಗಿ ಮಾರ್ಪಡಿಸಿದ್ದಾರೆ. ಈ ಗೋತ್ರಗಳನ್ನು ಮೈಸೂರು ಜಿಲ್ಲೆಯವರು ಒಪ್ಪುವುದಿಲ್ಲ. ಆದ್ದರಿಂದ ಇವರ ವಂಶಾವಳಿ ಹೆಸರುಗಳಿಗೆ ಗೋತ್ರಗಳು ಸೇರಿದ್ದು ನಂತರ ವೈದಿಕ ಧರ್ಮದ ಪ್ರಭಾವದಿಂದ ಎಂಬುದು ಸ್ಪಷ್ಟವಾಗುತ್ತದೆ.

ಮೇಲೆ ಹೇಳಿದ ಶಾಸನಗಳ ಕಾಲ 10ನೇ ಶತಮಾನ 11ನೇ ಶತಮಾನದಲ್ಲಿ ಕಂಡು ಬರುವಂತಹದ್ದು. ಇದು ಇವರು ತಮಿಳು, ಆಂಧ್ರಗಳಿಂದ ವಲಸೆ ಬಂದ ಕಾಲವನ್ನು 10ನೇ ಶತಮಾನದಿಂದ ಹಿಂದಕ್ಕೆ ಹೊಯ್ಯುತ್ತದೆ ಅಥವಾ ಕರ್ನಾಟಕ ಸಾಮ್ರಾಜ್ಯವೇ ತಮಿಳು ಆಂಧ್ರಗಳ ಗಡಿಗಳವರೆಗೆ ವಿಸ್ತರಿಸಿದ್ದರಿಂದ ನಮ್ಮ ಸದ್ಯದ ಕರ್ನಾಟಕದ ಗಡಿಯ ಮಿತಿಯನ್ನು ಮೀರುತ್ತದೆ. ಆದ್ದರಿಂದ ಈ ಜನಾಂಗ ಯಾವ ಕಾಲದಲ್ಲಿ ವಲಸೆ ಬಂದು ನೆಲೆಗೊಂಡಿತು ಎಂಬುದರ ಕಡೆಗೆ ಅಧ್ಯಯನದ ಅಗತ್ಯ ಕಂಡುಬರುತ್ತದೆ. ನನ್ನ ಪ್ರಸ್ತುತ ಪ್ರಬಂಧ ವಿಷಯ ಅವರ ಮದುವೆ ಸಂಪ್ರದಾಯವನ್ನು ಮಾತ್ರ ಮುಖ್ಯವಾಗಿ ಪರಿಭಾವಿಸಿದ್ದರಿಂದ ಇವರ ಕಾಲದ ವಿಚಾರದ ಬಗ್ಗೆ ದೊರೆತ ಮಾಹಿತಿಗಳನ್ನಷ್ಟೆ ವಿಷಯಕ್ಕೆ ಸಂಬಂಧಿಸಿದಂತೆ ಸೂಚಿಸಿದ್ದೇನೆ.

ಈ ಜನಾಂಗದಲ್ಲೂ ಅಕ್ಕನ ಮಗಳನ್ನು ಮದುವೆಯಾಗುವ ಸಂಪ್ರದಾಯವಿದೆ. ಹಾಗೆ ತಂದೆಯ ಅಕ್ಕ - ತಂಗಿ (ಸೋದರ ಅತ್ತೆ)ಯರ ಮಗಳನ್ನು ಮದುವೆಯಾಗ ಬಹುದು. ಸೋದರ ಮಾವನಿಗೆ ಕನ್ಯೆಯನ್ನು ಧಾರೆಯಾಗಿ ಎರೆದು ಕೊಡುವ ಮೊದಲ ಹಕ್ಕು ಇದೆ. ಆದ್ದರಿಂದ ಹುಡುಗಿಯ ಸೋದರ ಮಾವ ಮದು ಮಗಳಿಗೆ ಕಾಲುಂಗುರ ಕಡ್ಡಾಯವಾಗಿ ಮಾಡಿಸಿಕೊಡಬೇಕು ಹಾಗೂ ಧಾರೆಯ ಸಂದರ್ಭದಲ್ಲಿ ಮದುವೆ ಮಂಟಪಕ್ಕೆ ಸೋದರಮಾವ ವಧುವನ್ನು ಹೊತ್ತುಕೊಂಡು ಬರುತ್ತಾನೆ. ಈ ಎಲ್ಲ ಸಂಗತಿಗಳಿಂದ ಕನ್ಯತ್ವದ ಹಕ್ಕು ಸೋದರಮಾವನಿಗೆ ಸಲ್ಲುತ್ತದೆ. ವಯಸ್ಸು ಇತ್ಯಾದಿ ಗಳೆಲ್ಲಾ ಸರಿ ಹೊಂದಿ ಅವನು ಇಷ್ಟಪಟ್ಟರೆ ಕನ್ಯೆಯನ್ನು ವರಿಸಬಹುದು. ಇಲ್ಲದಿದ್ದರೆ ಅನ್ಯ ವರನಿಗೆ ತಾನೇ ನಿಂತು ಮದುವೆ ಮಾಡಿಸಬೇಕು. ಆದ್ದರಿಂದ ಸೋದರ ಮಾವ ಈ ಜನಾಂಗದಲ್ಲಿ ವಿಶೇಷವಾದ ಮನ್ನಣೆ ಪಡೆದಿದ್ದಾನೆ.

## 4. ವಿವಾಹ ಪೂರ್ವ ಆಚರಣೆಗಳು

### 4.1. ದೇವರು ಮಾಡೋದು(ದ್ಯಾವಾರು ನೋಡಿ)

ಯಾವುದೇ ಶುಭ ಕಾರ್ಯಗಳು ನಡೆಯುವ ಮೊದಲು ತಮ್ಮ ಕುಲ ದೇವತೆಯನ್ನು ನೆನೆದುಕೊಳ್ಳುವುದು, ಪೂರ್ವಿಕರನ್ನು ಸ್ಮರಿಸಿಕೊಳ್ಳುವುದು ಈ ಜನಾಂಗದಲ್ಲಿ ಮೊದಲಿನಿಂದಲೂ ನಡೆದುಕೊಂಡ ಬಂದ ಸಂಪ್ರದಾಯ.

ಕುಟುಂಬದಲ್ಲಿ ಹೆಣ್ಣಾಗಲಿ, ಗಂಡಾಗಲಿ ಪ್ರಾಪ್ತ ವಯಸ್ಕರಾದರೆ ಮುಂದಿನ ವಿಧಿ – ವಿಧಾನಗಳಿಗೆ ಪೂರ್ವಭಾವಿಯಾಗಿ 'ದೇವರು ಮಾಡಿಸುತ್ತಾರೆ. ಹುಡಿಗಿ ಮೈನೆರೆಯುವುದಕ್ಕೆ ಮೊದಲು, ಹುಡುಗನಿಗೆ ಮದುವೆಗೆ ಮೊದಲು ಅವರಿಗೆ ಕಡ್ಡಾಯವಾಗಿ ದೇವರು ಆಗಬೇಕು. ದೇಹ ಪ್ರಾಕೃತಿಕವಾಗಿ ಪರಿವರ್ತನೆಗೆ ಒಳಗಾಗು ಮೊದಲು ಅಥವಾ ಭಿನ್ನವಾಗುವುದಕ್ಕೆ ಮೊದಲು ದೇಹವನ್ನು ದೇವರಿಗೆ ಆವಾಹಿಸಿಕೊಂಡಿರಬೇಕು. ಈ ಕಾರಣ ಮೈನೆರೆಯುವುದಕ್ಕೆ ಮೊದಲು ದೇವರು ಮಾಡುತ್ತಾರೆ. ದೇವರಾದ ನಂತರ ಕಿವಿ ಚುಚ್ಚಿಸುತ್ತಾರೆ.

ದೇವರು ಮಾಡುವುದೆಂದರೆ ಕುಲದೇವತೆ ''ಅಂಕಾಳಮ್ಮ'' ಗೆ ಪಂಚ ಮುಡಿ ಕೊಟ್ಟು, ಪೂಜಿಸಿ, ಆಶೀರ್ವಾದ ಪಡೆಯುವುದು. ಈ ಆಚರಣೆ ಪೂರ್ವದಲ್ಲಿ ವನದಲ್ಲಿ ನಡೆಯುತ್ತಿತ್ತು. ಸಾಮೂಹಿಕವಾಗಿ ಜನಾಂಗದವರೆಲ್ಲಾ ಒಂದು ಊರಿನ 'ವನದಲ್ಲಿ ಸೇರಿ ತಮ್ಮ ಮಕ್ಕಳಿಗೆ ಈ ಆಚರಣೆಯನ್ನು ಮಾಡಿಸುತ್ತಿದ್ದರು. ಪೂಜಾರಿ ವಂಶದವರಿಗೆ ಮಾತ್ರ ದೇವರು ಮಾಡುವ ಹಕ್ಕು ನೀಡಲಾಗಿತ್ತು. ಮಕ್ಕಳನ್ನು ಸಾಲಾಗಿ ಕೂರಿಸಿ ದೇವತೆಯ ಕತ್ತಿಯಿಂದ 5 ಕೂದಲನ್ನು ಕತ್ತರಿಸಿ ಪಂಚಮುಡಿ ಮಾಡುತ್ತಿದ್ದರು. ನಂತರ ಅವರ ಹಣೆಗೆ ವಿಭೂತಿ ಹಚ್ಚಿ ಪೂಜಾರಿಗಳು ಮಂತ್ರ ಕೇಳಿ ಹರಸುತ್ತಿದ್ದರು. ಈ ಆಚರಣೆಯಾದ ನಂತರ ದೇವಿಗೆ ಕುರಿ ಬಲಿಕೊಟ್ಟು ಜನಾಂಗದವರೆಲ್ಲಾ ಸಾಮೂಹಿಕವಾಗಿ ವನಭೋಜನ ಮಾಡಿ ಅವರವರ ಊರುಗಳಿಗೆ ಹೋಗುತ್ತಿದ್ದರು.

ದೇವರು ಮಾಡುವ ಹಾಗೆ ಇನ್ನೊಂದು ಕುಲದೇವತೆ ಹಬ್ಬ ''ದೇವಾದೇವಿ''. ಕುಲದವರೆಲ್ಲ ಸೇರಿ ವನದಲ್ಲೇ ಈ ಹಬ್ಬವನ್ನು ಮಾಡುತ್ತಾರೆ. ಇದು ಸಹ ವರ್ಷಕ್ಕೊಮ್ಮೆ ತಪ್ಪದೇ ನಡೆಯುತ್ತದೆ. 14 ಗ್ರಾಮದವರೆಲ್ಲಾ ಒಂದು ಕಡೆ ಈ ಕುಲದೇವತೆ ಹಬ್ಬಕ್ಕೆ ಸೇರುವ ಸಂಪ್ರದಾಯ ಮೊದಲು ಇತ್ತು. ಈಗ ಆಯಾಯಾ ಊರುಗಳಲ್ಲೇ ಕುಲದೇವತೆ ಹಬ್ಬ ಮಾಡಿ ನೆರೆಯ ಊರಿನವರನ್ನು ಕರೆಯುತ್ತಾರೆ. **ಹೆಂಗಸರು ಹಬ್ಬದಲ್ಲಿ** ಭಾಗವಹಿಸುವುದನ್ನು ನಿಷೇದಿಸಿದಾರೆ. ಹಾಗೂ ಹಬ್ಬವಾದ ನಂತರ ಯಾವುದೇ ಅಡಿಗೆಯನ್ನು ಮನೆಗೆ ತೆಗೆದುಕೊಂಡು ಹೋಗದೆ ಅಲ್ಲೇ ತಿಂದು ತೀರಿಸಬೇಕು ಹಾಗೂ ಉಳಿದುಕೊಂಡರೆ ಹೊಂಡ ತೋಡಿ ಊಳುತ್ತಾರೆ. ಈ ಹಬ್ಬದ ಆಚರಣೆಗೂ 'ದಂಡಿನಕತೆಗೂ' (ಈ ಕತೆಯನ್ನು ಅನುಬಂಧದಲ್ಲಿ ಗಮನಿಸಬಹುದು). ಕೆಲವರು ಸಂಪರ್ಕ ಕಲ್ಪಿಸುತ್ತಾರೆ. ಪೂರ್ವದಲ್ಲಿ ದಂಡಿನಲ್ಲಿ ವಿಜಯ ಗಳಿಸಿದಕ್ಕಾಗಿ 'ವಿಜೋತ್ಸವದ' ಸಂಕೇತವಾಗಿ ಈ ಹಬ್ಬವನ್ನು ಮಾಡುತ್ತೇವೆ. ಆ ದಿನದ ಹಬ್ಬದಲ್ಲಿ ಹೆಂಗಸರು ಇರಲಿಲ್ಲ. ಆದ್ದರಿಂದಲೂ ಈಗಲೂ ಹೆಂಗಸರನ್ನು ಸೇರಗೊಡುವುದಿಲ್ಲ ಎನ್ನುತ್ತಾರೆ(ಶ್ರೀ ವೆಂಕಟರಮಣ ಶೆಟ್ಟಿ,ಕಳಲೆ). ಆದರೆ ಕೆಲವರು ದಂಡಿನ ಕತೆಗೂ 'ದೇವಾದೇವಿ' ಹಬ್ಬಕ್ಕೂ ಸಂಬಂಧ ಕಲ್ಪಿಸದೆ, ಮದುವೆಯ ಹಿಂದಿನ ದಿನ ಹಾಕುವ 'ಬಳ್ಳಾಗಿತ್ತಿ ವೇಷ' ಕ್ಕೆ(ಇದನ್ನು ಮುಂದೆ ವಿವರವಾಗಿ ಮುಂದೆ ಕೊಟ್ಟಿದ್ದೇನೆ) ಮಾತ್ರ ಪೂರಕವಾಗಿ ಈ ಕತೆ ಹೇಳುತ್ತಾರೆ.

ಒಟ್ಟಿನಲ್ಲಿ ಈ ಜನಾಂಗದವರು ಕುಲದೇವತೆ ಸ್ಮರಿಸಿಕೊಳ್ಳುವುದು 'ದೇವರು ಮಾಡಿಸುವಾಗ' ಮತ್ತು 'ದೇವಾದೇವಿ' ಹಬ್ಬದಲ್ಲಿ.

## 4.2 ಬಯಲು – ಆಲಯ :

ದ್ಯಾಮವ್ವ ಪ್ರಸಾದಿ(ದೇವರು ಮಾಡಿದ್ದು) ಇಂದು ವನವನ್ನು ಬಿಟ್ಟು ಗುಡಿ ಸೇರಿದೆ, ಪೂಜಾರಿ ವಂಶದವರು ಬೆಟ್ಟ ಇರುವ ಯಳಂದೂರು ತಾಲೂಕಿನ ಮಾಂಬಳ್ಳಿಯಲ್ಲಿ ಅಂಕಾಳಮ್ಮನ ಗುಡಿ ಕಟ್ಟಿಕೊಂಡಿದ್ದಾರೆ. ಬಯಲುದೇವತೆ ಗುಡಿ ಸೇರಿದಾಗ ಉಂಟಾಗುವ ಪರಿವರ್ತನೆಗಳೆಲ್ಲ ಮಾಂಬಳ್ಳಿಯ ಅಂಕಾಳಮ್ಮನ ಗುಡಿಯಲ್ಲಿ ಕಂಡು ಬರುತ್ತದೆ. ಇಲ್ಲಿ ವರ್ಷಕ್ಕೊಮ್ಮೆ 'ಸಂಪ್ರಕ್ಷಣೆ' (ಸಂತರ್ಪಣೆ) ಮಾಡುತ್ತಾರೆ. ಯಜ್ಞ – ಹೋಮಗಳನ್ನು ಮಾಡುತ್ತಾರೆ. ಮಾಂಸಹಾರ ನಿಷೇಧಿಸಿದ್ದಾರೆ. 'ದೇವರು ಮಾಡುವ' 'ಆಚರಣೆ ವೈದೀಕೀಕರಣಗೊಂಡಿದೆ. ಸಸ್ಯಹಾರಿಗಳು 'ದೇವಾದೇವಿ' ಯನ್ನು ಬಿಟ್ಟು ಸಂಪ್ರಕ್ಷಣೆಗೆ ಭಾಗಿಯಾಗುವುದು ಇತ್ತೀಚೆಗೆ ಕಂಡು ಬರುತ್ತಿದೆ. ಒಬ್ಬಳೇ ಕುಲದೇವತೆಗೆ ಬಯಲು – ಗುಡಿಗಳಲ್ಲಿ ಎರಡು ಭಿನ್ನವಾದ ಆಚರಣೆಗಳು ಉಂಟಾಗಿವೆ.

ನಮ್ಮ ಗ್ರಾಮದೇವತೆಗಳೂ, ಕುಲದೇವತೆಗಳೂ ಬಯಲಲ್ಲಿ ಇದ್ದಂಥವರು ಹಾಗೂ ಗುಡಿ – ಗೋಪುರಗಳನ್ನು ನಿರಾಕರಿಸಿ ನಿರ್ವಿಕಾರ ರೂಪವನ್ನು ಒಪ್ಪಿಕೊಂಡವರು. ಸಂಸ್ಕೃತಿಯ ಚಲನಶೀಲತೆಗೂ ನಿರ್ವಿಕಾರ ಕಲ್ಪನೆಗೂ ಒಂದು ಅವಿಭಾಜ್ಯ ಸಂಬಂಧವಿದೆ. ಈ ಚಲನಶೀಲತೆಯನ್ನು ಕಳೆದುಕೊಂಡ ಮೂರ್ತ ರೂಪಕ್ಕೆ ಬಂದಾಗ ಒಂದು ನಿರ್ದಿಷ್ಟ ಚೌಕಟ್ಟಿಗೆ ಸೀಮಿತವಾಗಿಬಿಡುತ್ತವೆ. ಸದ್ಯದಲ್ಲಿ ಬಯಲಲ್ಲಿ ನಡೆಯುವ 'ದೇವಾದೇವಿಗೂ'.

ಗುಡಿಯಲ್ಲಿ ನಡೆಯುವ ಸಂಪ್ರಕ್ಷಣೆಗೂ ಇರುವ ವ್ಯತ್ಯಾಸಗಳು ಇದಾಗಿದೆ. ಪ್ರಧಾನ ಸಂಸ್ಕೃತಿಯ ಪ್ರಭಾವವನ್ನು ಅಂಕಾಳಮ್ಮನ ಗುಡಿಯಲ್ಲಿ ಕಾಣುತ್ತೇವೆ. ಆದರೆ ಯಾವುದೇ ಗುಡಿ – ಗೋಪುರಗಳಿಲ್ಲದ ಬಯಲು ಅಂಕಾಳಮ್ಮನಿಗೆ ಈ ಒತ್ತಡಗಳಿಲ್ಲ.

## 4.3 ಹೆಣ್ಣು ನೋಡೋದು

ತೀರ ಅಲ್ಪಸಂಖ್ಯಾತರಾದ್ದರಿಂದ, ಕೇವಲ 14 ಗ್ರಾಮ ನಿವಾಸಿಗಳಾದ್ದರಿಂದ ಪರಸ್ಪರ ಅಪರಿಚಿತರಾದ ಕುಟುಂಬದವರೇ ಇಲ್ಲವೆನ್ನಬಹುದು. ವರ್ಷಕ್ಕೆ ಎರಡು ಬಾರಿ ನಡೆಯುವ ಕುಲದೇವತೆ ಹಬ್ಬಗಳಾದ ದೇವಾದೇವಿ ಮತ್ತು ಸಂಪ್ರೋಕ್ಷಣೆಯಲ್ಲಿ 14 ಗ್ರಾಮದವರು ಸೇರುವುದರಿಂದ ಗಂಡು ಇದ್ದವರು ಹೆಣ್ಣನ್ನು, ಹೆಣ್ಣು ಇದ್ದವರು ಗಂಡನ್ನು ವಿಚಾರಿಸಿಕೊಳ್ಳುತ್ತಾರೆ. ಮೊಂಬಳ್ಳಿಯಲ್ಲಿರುವ ಅಂಕಾಳಮ್ಮನ ಗುಡಿಗೆ ಸ್ತ್ರೀಯರಿಗೂ ಪ್ರವೇಶವಿರುವುದರಿಂದ ಜನಾಂಗದ ಹೆಣ್ಣು – ಗಂಡುಗಳೆಲ್ಲಾ ಅಲ್ಲಿ ಸೇರುವುದರಿಂದ ಇದೊಂದು ವಧುವರ ಅನ್ವೇಷಣೆಯ ಕೇಂದ್ರವಾಗಿದೆ. ಗುಡಿಯಲ್ಲಿ ಹೆಣ್ಣು ಗಂಡನ್ನು ನೋಡಿ ಮೆಚ್ಚಿಕೊಂಡವರು ಆಯಾಯ ಊರುಗಳಿಗೆ ಹೋಗಿ ಕೇಳುವ ಪದ್ಧತಿ ಇದೆ. ತೀರ ಅಲ್ಪ ಸಂಖ್ಯಾತರಾದ ಇವರಿಗೆ ದೂರದ ಸಂಬಂಧಿಗಳು, ಹೊಸ ಸಂಬಂಧಿಗಳು ಎನ್ನುವ ಪ್ರಶ್ನೆಯೇ ಇಲ್ಲವಾಗಿದೆ. ಒಂದಲ್ಲ ಒಂದು ಕಡೆಯಿಂದ ಅವರ ಸಂಬಂಧಿಗಳೇ ಆಗಿರುತ್ತಾರೆ. ಹೆಣ್ಣು – ಗಂಡುಗಳಿದ್ದರೆ ಅವರ ಪೂರ್ವಾಪರಗಳೆಲ್ಲಾ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಅವರಿಗೆ ಮೊದಲೇ ತಿಳಿದಿರುತ್ತದೆ. ಆದ್ದರಿಂದ ಇವರ ಕುಲಾಚಾರಗಳ ಬಗ್ಗೆ, ನಡವಳಿಕೆಗಳ ಬಗ್ಗೆ ಅನ್ಯರನ್ನು ವಿಚಾರಿಸುವ ಪ್ರಸಂಗಗಳು ಕಡಿಮೆ. ಈ ಕಾರಣ ಮದುವೆ ದಲ್ಲಾಳಿಗಳು ಈ ಜನಾಂಗದಲ್ಲಿ ಇಲ್ಲ. ಇತ್ತೀಚೆಗೆ ವರದಕ್ಷಿಣೆ ಪದ್ಧತಿ ಸೇರಿಕೊಂಡಿದೆ. ಹೆಣ್ಣು:ಗಂಡನ್ನು ನೋಡಲಿಕ್ಕೆ ಹೋಗುವುದು, ಅವರ ಮದುವೆಯ ಮೊದಲಿನ ಪ್ರಯತ್ನ. ಈ ಸಂದರ್ಭದಲ್ಲಿ ಹೆಣ್ಣು ಶೃಂಗರಿಸಿಕೊಂಡು ಸಿಹಿ–ತಿಂಡಿ ಪಾನೀಯಗಳಿರದ ಬಂದು ವರನಿಗೆ ಮುಖ ತೋರಿಸುತ್ತಾಳೆ(ಮೊದಲು ಬಂದಾಗ ಖಾರ ಪದಾರ್ಥಗಳನ್ನು ಕೊಡಬಾರದೆಂದು ಸಿಹಿ ಮಾತ್ರ ಕೊಡುತ್ತಾರೆ) ಈ ಸಂದರ್ಭದಲ್ಲಿ ಬಾಲೆ

ಕಾಫಿ — ತಿಂಡಿಗಳಲ್ಲಿ ಮಾತುಕತೆ ನಡೆಯುತ್ತದೆ.

ಸಾಮಾನ್ಯವಾಗಿ ಗಂಡಿಗೆ ಹೆಚ್ಚು ಅಂತ್ಯಂತ ಸ್ವಾತಂತ್ರ್ಯವಿರುತ್ತದೆ. ಸಾಮಾನ್ಯವಾಗಿ ಒಬ್ಬ ಹುಡುಗ ಎಂಟು — ಹತ್ತು ಹುಡುಗಿಯರನ್ನು ನೋಡುತ್ತಾನೆ. ಮೊದಲೇ ಹೇಳಿದಾಗ್ಗೆ ಇದೊಂದು ನಿರ್ಣಾಯಕವಾದ ಶಾಸ್ತ್ರವಲ್ಲ. ಆದ್ದರಿಂದ ಬರೀ ಕಾಫಿ — ಟೀ ಗಳಲ್ಲೇ ಈ ಸಂಬಂಧ ನಿಂತು ಹೋಗಬಹುದು. ವಧುಃವರನಿಗೆ ಇಷ್ಟವಾದರೆ ನಂತರ 'ಮೊಪ್ಪಿಂಗೊಡು' ಶಾಸ್ತ್ರಕ್ಕೆ ಬರುವಂತೆ ಹೇಳುತ್ತಾರೆ.

## 4.4 ಪೊಪ್ಪಂಗೂಡು:

ಹೆಣ್ಣು:ಗಂಡು ನೋಡಿ ಮನೆಯವರೆಲ್ಲ ಒಪ್ಪಿಕೊಂಡ ಮೇಲೆ ಎರಡು ಊರಿನ ಜಾತಿ ಮುಖಂಡರು ಸೇರಿ ಪೊಪ್ಪಂಗೂಡು(ಬೇಳೆ–ಅನ್ನ) ಮಾಡುತ್ತಾರೆ. ಇದೊಂದು ಒಪ್ಪಿದ ಊಟವಾಗಿರುತ್ತದೆ. ಇದುವರೆಗೂ ಸಿಹಿತಿಂಡಿ – ಪಾನೀಯಗಳನ್ನ ಇದ್ದವರು ಈಗ ಊಟಕ್ಕೆ ಒಪ್ಪುತ್ತಾರೆ. ಒಪ್ಪಿ ಅವರ ಮನೆಯಲ್ಲಿ ಊಟ ಮಾಡಿದ ಮೇಲೆ ಹುಡುಗಿ:ಹುಡುಗನ ಮನೆತನ ಒಪ್ಪಿಕೊಂಡರು ಎಂದೇ ಅರ್ಥ. ಸಾಮಾನ್ಯವಾಗಿ ಆ ದಿನ ರಾತ್ರಿ ಈ ಸಿಹಿಊಟ ಇಟ್ಟುಕೊಂಡಿರುತ್ತಾರೆ. ಅನುಕೂಲವಾಗಿರುವವರು ಊರೊಳಗಿರುವ ಜಾತಿಯವರಿಗೆಲ್ಲ ಊಟ ಹಾಕುತ್ತಾರೆ. ಬಡವರಾದರೆ ಮನೆಗೊಬ್ಬರನ್ನು ಕರೆದು ಊಟ ಹಾಕುತ್ತಾರೆ. ಊಟಕ್ಕೆ ಕೂರಿಸಿ ಮೊದಲು ಬಿಳಿ ಅನ್ನ – ನಂತರ ಪೊಪ್ಪು(ಬೇಳೆ ತೊವ್ವೆ), ತುಪ್ಪ, ಬಾಳೆಹಣ್ಣು, ಹಾಕುತ್ತಾರೆ. ನಂತರ ಸಾಂಬಾರು, ಪಲ್ಯ ಇತ್ಯಾದಿ ಬಡಿಸುತ್ತಾರೆ. ಇದು ಆ ಮನೆತನ ಸಂಬಂಧಗಳ ಮೊದಲ ಊಟವಾಗಿರುತ್ತದೆ. ಬಹಳ ಸಂಭ್ರಮ, ಸಡಗರಗಳಿಂದ ಆಚರಿಸುತ್ತಾರೆ. ಸಾಮಾನ್ಯವಾಗಿ ಹೆಣ್ಣಿನ ಮನೆಯವರಿಗೆ ಇದೊಂದು ಸಡಗರದ ವಿಚಾರ. ಏಕೆಂದರೆ ಈಗಾಗಲೇ ತಮ್ಮ ಮನೆಯ ಹೆಣ್ಣನ್ನು ಹಲವಾರು ಗಂಡುಗಳಿಗೆ ತೋರಿಸಿ ಒಪ್ಪದೇ ಇರುವ ಸಾಧ್ಯತೆಗಳು ಹೆಣ್ಣಿನ ಮನೆಯವರ ಅನುಭವಕ್ಕೆ ಬಂದಿರುತ್ತದೆ. ಆದ್ದರಿಂದ ಒಪ್ಪಿದ ಊಟ ಮಾಡುವುದು ಅವರಿಗೊಂದು ಕಂಟಕ ಕಳೆದಂತೆ. ಈ ಕಾರಣ ಮನೆಯ ಹೆಂಗಸರ ಬಹಳ ಪ್ರೀತಿ ಸಂಭ್ರಮಗಳಿಂದ ಹೊಸ ಸಂಬಂಧಿಕರೊಡನೆ ಬೆರೆತು ಊಟ ಮಾಡುತ್ತಾರೆ. 'ಪೊಪ್ಪಂಗೂಡು' ಸಾಮಾನ್ಯವಾಗಿ ಹೆಣ್ಣಿನ ಮನೆಯವರ ಕಡೆಯಲ್ಲಿ ಹೆಚ್ಚು ನಡೆಯುವುದು.(ಈ ವಿಚಾರದಲ್ಲಿ ಮಾಹಿತಿ ಕೊಟ್ಟವರು – ಸಾಗರ ಸುಬ್ಬಪ್ಪರು ಮತ್ತು ಪುಟ್ಟಮ್ಮನವರು).

## 4.5 ಒಪ್ಪಂದ ವೀಳ್ಯ

ಇದು ಈಗ 'ಮೊಂಪ್ಪಂಗೂಡು' ಶಾಸ್ತ್ರದ ದಿನವೇ ನಡೆಯುತ್ತದೆ. ಹೆಣ್ಣಿನ ಕಡೆ ಐದು ಮಂದಿ ಯಜಮಾನರು, ಗಂಡಿನ ಕಡೆ ಐದು ಮಂದಿ ಯಜಮಾನರು ಸೇರಿ ಹುಡುಗಿಯ ತಂದೆಯಿಂದ ಹುಡುಗನ ತಂದೆಯ ಕೈಗೆ ಒಪ್ಪು ವೀಳ್ಯ ಕೊಡಿಸುತ್ತಾರೆ. ಹುಡುಗಿ ಮನೆಯಲ್ಲಿ ಈ ಕಾರ್ಯ ನಡೆದರೆ ಹುಡುಗನ ಕಡೆಯವರು ಐದು ತಟ್ಟೆ ಸಾಮಾನು ತರುತ್ತಾರೆ. ಅಂದರೆ ಕಾಯಿ, ಹಣ್ಣು, ವೀಳ್ಯ, ವಸ್ತ್ರ, ಹೂವು ಗಳನ್ನು ಐದು ತಟ್ಟೆಗಳಿಗೆ ತುಂಬಿ ಕುಲದೇವತೆ ಹಾಗೂ ಮನೆದೇವತೆ ನೆನೆದು ಈ ವೀಳ್ಯ ಕೊಡಿಸುತ್ತಾರೆ. ಹುಡುಗ:ಹುಡುಗಿಯ ಸೋದರ ಮಾವಂದಿರು ಈ ಆಚರಣೆಯ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಒಪ್ಪುವೀಳ್ಯ ಕೊಟ್ಟು ಮೊಪ್ಪಂಗೂಡು ಆದ ಮೇಲೆ ಮುಂದೆ ಮದುವೆಗೆ ಸಿದ್ಧ ಮಾಡಿಕೊಳ್ಳುವುದರತ್ತ ಎರಡು ಮನೆಯವರು ತೊಡಗುತ್ತಾರೆ. ಇತ್ತೀಚೆಗೆ ಇದೇ ಸಂದರ್ಭದಲ್ಲಿ ವರದಕ್ಷಿಣೆಯ ಮಾತುಕತೆಗಳು ನಡೆಯುತ್ತವೆ. ಎರಡು ಮನೆಗಳ ಸಂಬಂಧ ನಿರ್ಧಾರವಾಗುವ ಆತಂಕದ ಗಳಿಗೆಗಳಿವು. ವರದಕ್ಷಿಣೆ ವಿಚಾರಗಳಲ್ಲಿ ಇತ್ತೀಚೆಗೆ ಅನೇಕ ಸಂಬಂಧಗಳು ಕಡಿದು ಹೋಗಿವೆ.

## 5. ಇತರ ಶಾಸ್ತ್ರಗಳು :

ಒಪ್ಪು ವೀಳ್ಯ ಕೊಟ್ಟು ಒಪ್ಪಂದವಾಗಿ ಮುಗಿದರೆ ಅರ್ಧ ಮದುವೆ ಆದಹಾಗೆ. ನಂತರ ಎರಡು ಕುಟುಂಬಗಳು ಮದುವೆಯ ಸಿದ್ಧತೆಯಲ್ಲಿ ಮುಳುಗಿ ಹೋಗುತ್ತವೆ. ಮನೆಯ ಹಿರಿಯ ಗಂಡಸರು ಲಗ್ನ ಪತ್ರಿಕೆ ಕಟ್ಟಿಸೋದು ಮತ್ತು ಬಂಧು ಬಳಗಕ್ಕೆ ಹಂಚಿ ಕರೆಯುವುದಕ್ಕೆ ತೊಡಗುತ್ತಾರೆ. ಲಗ್ನ ಪತ್ರಿಕೆ ಕಟ್ಟಿಸೋದು ಮುಹೂರ್ತ ಇತ್ಯಾದಿಗಳಲ್ಲಿ ವೈದಿಕ ಸಂಪ್ರದಾಯದಂತೆ ಊರಿನ ಬ್ರಾಹ್ಮಣರೋ, ಪೋನ್ಸವರೋ ಪಂಚಾಂಗ ನೋಡಿ ನಿರ್ಧರಿಸುತ್ತಾರೆ. ಸಾಮಾನ್ಯವಾಗಿ ಹೆಣ್ಣಿನ ಮನೆಯವರು ಮದುವೆ ಮಾಡುವ ಜವಾಬ್ದಾರಿ ಹೊರಬೇಕಾಗುತ್ತದೆ. ಮನೆಯ ಯಜಮಾನ ಲಗ್ನ ಪತ್ರಿಕೆ ಕಟ್ಟಿಸೋದು, ಹಣ ಹೊಂದಿಸೋದು, ಕೆಲಸದಲ್ಲಿ ನಿರತನಾಗುತ್ತಾನೆ. ಆದರೆ ಮನೆಯ ಹಿರಿಯ ಯಜಮಾನಿಯರು ಈ ಸಂದರ್ಭದಲ್ಲಿ ಹುಡುಗಿಗೆ ಬೇಕಾದ ಓಲೆ-ಉಂಗುರ ಇತ್ಯಾದಿ ಆಭರಣಗಳನ್ನು ಮಾಡಿಸಲು ಆಚಾರಿಯನ್ನು ಮನೆಗೆ ಕರೆಸಿಕೊಂಡು ಮನೆಯಲ್ಲಿ ಹಳೆಯ ಚಿನ್ನವಿದ್ದರೆ ಕೊಟ್ಟು ಓಲೆ ಜುಮುಕಿ, ಇತ್ಯಾದಿಗಳನ್ನು ಮಾಡಿಸುತ್ತಾರೆ. ಹಣ ಇರುವವರಾದರೆ ಕತ್ತಿನ ಸರವನ್ನು ಮಾಂಗಲ್ಯ ಸರವನ್ನು ಮಾಡಿಸುತ್ತಾರೆ. ಮೂಲತಃ ಇವರು ನಕಲಿ ಆಭರಣ ಮಾರಾಟಗಾರರಾದ್ದರಿಂದ ಕೆಲವೊಮ್ಮೆ ಮದುವೆಗಳಲ್ಲಿ ನಕಲಿ ಆಭರಣಗಳನ್ನೇ ಬಳಸುತ್ತಾರೆ. ಆಭರಣಗಳನ್ನು ಆಚಾರಿಗಳ ಮೂಲಕ ಬೇಕಾದಂತೆ ಮಾಡಿಸುವ ಜವಾಬ್ದಾರಿ ಮನೆಯ ಹೆಂಗಸರೇ ವಹಿಸುತ್ತಾರೆ. ಇವುಗಳಿಗೆ ಬೇಕಾದ ಹಣವನ್ನು ಕುಟುಂಬದ ಯಜಮಾನ ಭರಿಸುತ್ತಾನೆ. ಒಪ್ಪಂದವಾದ ವರ್ಷದೊಳಗೆ ಸಾಮಾನ್ಯವಾಗಿ ಮದುವೆಯು ಮುಗಿದು ಹೋಗುತ್ತದೆ. ಈ ನಡುವಿನ ಕಾಲಾವಧಿಯಲ್ಲಿ ಹೆಣ್ಣು-ಗಂಡಿಗೆ ಹೊಂದಿಕೆಯನ್ನು ನೋಡುವ ಅನೇಕ ಶಾಸ್ತ್ರಗಳನ್ನು ಮನೆಯೊಳಗೆ ಕುಟುಂಬದ ಹೆಂಗಸರು ಹತ್ತಿರದ ಸಂಬಂಧಿಗಳು

ಸೇರಿ ಮಾಡುತ್ತಾರೆ. ಅವುಗಳಲ್ಲಿ ಬಹಳ ಮುಖ್ಯವಾದದ್ದು ಹೇನಿನ ಶಾಸ್ತ್ರ ಮತ್ತು ಅಪ್ಪಳ ಶಾಸ್ತ್ರ. ಈ ಶಾಸ್ತ್ರಗಳಲ್ಲಿ ಗಂಡಸರು ಸಾಮಾನ್ಯವಾಗಿ ಭಾಗಿಗಳಾಗಿರುವುದಿಲ್ಲ.

5.1 ಹೇನಿನ ಶಾಸ್ತ್ರ :

ಇದು ಬಹಳ ಮುಖ್ಯವಾದ ನಿರ್ಣಯಕವಾದ ಶಾಸ್ತ್ರವಲ್ಲ. ಏಕೆಂದರೆ ಈ ಶಾಸ್ತ್ರದಿಂದ ಕೆಲವೊಮ್ಮೆ ಫಲಿತಾಂಶಗಳೇ ಸಿಗುವುದಿಲ್ಲ. ಆದ್ದರಿಂದ ಇತ್ತೀಚೆಗೆ ಈ ಶಾಸ್ತ್ರವನ್ನು ಕೈಬಿಟ್ಟಿದ್ದಾರೆ. ಹೇನಿನ ಶಾಸ್ತ್ರದ ಸ್ವರೂಪ ಹೀಗಿದೆ. ಎರಡು ಸೇರಿ ಅಕ್ಕಿಯನ್ನು ತೆಗೆದು ಮನೆಯ ಹಜಾರದಲ್ಲಿ ಗುಡ್ಡೆ ಹಾಕುತ್ತಾರೆ. ಹೀಗೆ ಹಾಕುವ ಮೊದಲು ಆ ಭಾಗವನ್ನು ತೊಳೆದು ರಂಗೋಲಿ ಬಿಟ್ಟು ಸ್ವಚ್ಛಗೊಳಿಸಿ ಪೂಜೆ ಮಾಡಿರುತ್ತಾರೆ. ಈ ರಾಶಿ ಹಾಕಿದ ಅಕ್ಕಿ ಗುಡ್ಡೆಯ ಮೇಲೆ ಒಂದು ಅರಿಸಿನದ ಕೊನ, ಇನ್ನೊಂದು ಮಸಿಕೊನ ನೆಡುತ್ತಾರೆ. ಮುತ್ತೈದೆ ತಲೆಯಿಂದ ಒಂದು ಹೇನು ಹಿಡಿದು ಅಕ್ಕಿ ಗುಡ್ಡೆಯ ಮೇಲೆ ಬಿಡುತ್ತಾರೆ. ಈ ಹೇನು ಅಕ್ಕಿ ಗುಡ್ಡೆಯನ್ನು ಹತ್ತಿ ಅರಿಸಿನದ ಕೊನೆಯನ್ನು ಮುಟ್ಟಿದರೆ ಶುಭ ಸೂಚಕವೆಂದು, ಮಸಿ ಕೊನ ಹತ್ತಿದರೆ ಅಶುಭವೆಂದು ನಂಬುತ್ತಾರೆ. ಮೊದಲೇ ಹೇಳಿದಾಗ ಇದೊಂದು ನಿರ್ಣಯಕವಾದ ಶಾಸ್ತ್ರವಲ್ಲ ಏಕೆಂದರೆ ಕೆಲವೊಮ್ಮೆ ಹೇನು ಅಕ್ಕಿ ಗುಡ್ಡೆಯನ್ನು ಹತ್ತಿ ಅರಿಸಿನ ಕೊನೆಯನ್ನು ತಲುಪಲು ದಿನಗಟ್ಟಲೆ ತೆಗೆದುಕೊಳ್ಳಬಹುದು. ಜೊತೆಗೆ ಅತ್ಯಂತ ಸೂಕ್ಷ್ಮವಾದ ಶಾಸ್ತ್ರವಾದ್ದರಿಂದ ಹೇನು ಹರಿದಾಡುವ ಸ್ಥಳದಲ್ಲೇ ಕಣ್ಣನು ನೆಟ್ಟು ಕೂರಬೇಕು. ಈ ಎಲ್ಲ ಕಾರಣಗಳಿಂದ ಇದೊಂದು ಕುಚೋದ್ಯದ ಶಾಸ್ತ್ರವೆಂದು ಸಾಗರ ವೆಂಕಟರಮಣ ಶೆಟ್ಟರು ಹೇಳುತ್ತಾರೆ. ಇತ್ತೀಚೆಗೆ ಸಂಪೂರ್ಣ ಈ ಶಾಸ್ತ್ರವನ್ನು ಕೈಬಿಟ್ಟಿದ್ದಾರೆ. ಆದರೆ ಈ ಶಾಸ್ತ್ರವನ್ನು ಕದ್ದು-ಮುಚ್ಚಿ ಹೆಂಗಸರು ಗಂಡಸರಿಗೆ ತಿಳಿಯದಂತೆ ಒಳಗೊಳಗೆ ಮಾಡಿಕೊಳ್ಳುತ್ತಾರೆ. ಆದರೆ ಫಲಿತಾಂಶವನ್ನು ಅಷ್ಟೇ ಗೌಪ್ಯವಾಗಿ ಕಾಪಾಡುತ್ತಾರೆ. ಎನ್ನುವ ಅಭಿಪ್ರಾಯವನ್ನು ಕೆಲವ ತಿಳಿಸಿದರು.

## 5.2 ಅಪ್ಪಳ ಶಾಸ್ತ್ರ :

ಇದು ಬಹಳ ಮುಖ್ಯವಾದ ಶಾಸ್ತ್ರವಾಗಿರುತ್ತದೆ. ಇದು ಸಹ ಹೆಂಗಸರಷ್ಟೆ ಸೇರಿ ಮಾಡುವ ಶಾಸ್ತ್ರವಾಗಿದೆ. ಉದ್ದಿನ ಅಪ್ಪಳ ಮಾಡುವ ಸಂದರ್ಭದಲ್ಲಿ ಈ ಶಾಸ್ತ್ರ ನಡೆಯುತ್ತದೆ. ಇದೊಂದು ಶ್ರಮದಾಯಕವಾದ ಕೆಲಸವಾದ್ದರಿಂದ ಊರಿನ ಮುತ್ತೈದೆಯರೆಲ್ಲಾ ಸೇರಿ ಈ ಕಾರ್ಯವನ್ನು ಪೂರೈಸಿಕೊಡುತ್ತಾರೆ. ಮದುವೆಗೆ ಸಾವಿರಾರು ಅಪ್ಪಳ ಬೇಕಾಗುವುದರಿಂದ ಮನೆಯವರಷ್ಟೆ ಲಟ್ಟಿಸಲು ಅಸಾಧ್ಯವಾದ್ದರಿಂದ ಒಂದು ಶುಭ ದಿನದಂದು ಊರಿನ ಮುತ್ತೈದೆಯರನ್ನು ಕರೆದು ಅವರಿಗೆ ಅರಿಸಿನ– ಕುಂಕುಮ ಕೊಟ್ಟು ವೀಳ್ಯ– ಹಣ್ಣು ಕೊಟ್ಟು ಮೊದಲು ಐದು ಮಂದಿ ಮುತ್ತೈದೆಯರನ್ನು ಅಪ್ಪಳದ ಹಿಟ್ಟನ್ನು ಮಣೆಯ ಮೇಲೆ ಇಟ್ಟು ಲಟ್ಟಿಸುತ್ತಾರೆ. ನಂತರ ಮನೆಯವರು, ಕನ್ಯೆಯರು, ಹೆಂಗಸರು, ಮಕ್ಕಳು ಎಲ್ಲ ಸೇರಿ ಸಾಮೂಹಿಕವಾಗಿ ಅಪ್ಪಳವನ್ನು ಲಟ್ಟಿಸಿ ಅರ್ಧದಿನದಲ್ಲಿ ಆ ಕೆಲಸ ಮುಗಿಸಿ ನಂತರ ಅವರವರ ಮನೆಗಳಿಗೆ ಹೋಗುತ್ತಾರೆ. ಕೆಲವು ಮನೆಗಳಲ್ಲಿ ಕೆಲವೊಮ್ಮೆ ವಧು ಮಗಳನ್ನು ಆನೆ ಮೇಲೆ ಕೂರಿಸಿ ಅಕ್ಕಿ ಕಾಳಿನಿಂದ ಶಾಸ್ತ್ರವನ್ನು ಮಾಡುತ್ತಾರೆ. ಹೀಗೆ ಮುತ್ತೈದೆಯರು — ಮದುಮಗಳಾಗಬೇಕಾದ ಕನ್ಯೆಯರು ಕೂತು ಅಪ್ಪಳ ಲಟ್ಟಿಸುವಾಗ ವಧು ಮಗಳನ್ನು ಅವಳ ಭಾವಿ ಗಂಡನೊಡನೆ ಹೋಲಿಸಿ ತಮಾಷೆ ಮಾಡುವುದುಂಟು ಹಾಗೂ ಶೋಭಾನ ಪದಗಳನ್ನು ಹಾಡುತ್ತಾರೆ. ಹಿರಿಯರ ಅಜ್ಜಿಯರು ನಮ್ಮ ಮೊಮ್ಮಗಳ ಬಾಳು ಹಾಲು ಸಾಗರದಾಗೆ ಆಗಲಿ ಎಂದು ಹರಸುತ್ತಾರೆ.

ಹೀಗೆ ಮದುವೆಯ ದಿನಗಳು ಸಮೀಪಿಸುತ್ತಿದ್ದಂತೆ 'ಮದುವೆ ಮನೆ' ಎನ್ನುವ ಅರ್ಥವನ್ನು ಈ ಎಲ್ಲ ಶಾಸ್ತ್ರಗಳನ್ನು ಮಾಡುವುದರಿಂದ ಪಡೆದು ಕೊಳ್ಳುತ್ತದೆ. ನಂತರ ಮನೆ ಸುಣ್ಣ, ಬಣ್ಣ ತುಂಬಿ ಮನೆಯನ್ನು ಇತರ ಮನೆಗಳಿಗಿಂತ ಭಿನ್ನವಾಗಿ ಪ್ರತ್ಯೇಕಿಸುತ್ತಾರೆ.

## 5.3. ವಂಡ ಮಾತದಿ :

ಮದುವೆಯ ಪೂರ್ವದಲ್ಲಿ ಈ ಆಚರಣೆ ನಡೆಯುತ್ತದೆ. ಮದುವೆಗೂ ಈ ಆಚರಣೆಗೂ ಒಂದು ವಾರದ ಅಂತರವಿರುತ್ತದೆ. 'ವಂಡ ಮಾತದಿ' ಎನ್ನುವುದು ತೆಲುಗು ಪದ. 'ವಂಡ' ಎಂದರೆ ಅಡುಗೆ ಎನ್ನುವ ಅರ್ಥ. ಮಾತದಿ ಎಂದರೆ ಒಳ್ಳೆಯದು. ಆಚರಿಸುವುದು ಎನ್ನುವ ಅರ್ಥಗಳಿರಬಹುದು. ಒಟ್ಟಾರೆ 'ವಂಡ ಮಾತದಿ' ಎನ್ನುವ ಆಚರಣೆಯ ಅರ್ಥ ಸತ್ತವರಿಗೆ ಅನ್ನಹಾಕುವುದು. ಯಾವುದೇ ಶುಭ ಕಾರ್ಯಗಳಿಗೂ ಮೊದಲು ಪೂರ್ವಿಕರನ್ನು ನೆನೆಸಿಕೊಳ್ಳುವುದು ಇವರ ನಂಬಿಕೆಯಾಗಿದೆ. ಆದ್ದರಿಂದ 'ವಂಡ ಮಾತದಿ' ಪೂರ್ವಿಕರ ಹಬ್ಬವೇ ಆಗಿದೆ. ಆ ದಿನ ಮನೆ – ಮಂದಿಗಳೆಲ್ಲಾ ಸ್ನಾನ ಮಡಿಗಳನ್ನು ಮಾಡಿ, ಮನೆ – ಕೋಣೆಗಳನ್ನು ತಾರಿಸಿ, ನೆಂಟರಿಷ್ಟರನ್ನು ಕರೆದು ಈ ಆಚರಣೆ ಮಾಡುತ್ತಾರೆ. ಸಾಮಾನ್ಯವಾಗಿ ಮಧ್ಯಾಹ್ನದ ಹೊತ್ತು ಈ ಆಚರಣೆ ಆಗುತ್ತದೆ. ಹೊಸ ಪಂಚೆ – ಸೀರೆಗಳನ್ನು ತಂದು ಪೂರ್ವಿಕರ ಆಕೃತಿಗಳನ್ನು ರಚಿಸುತ್ತಾರೆ. ಹೀಗೆ ರಚಿಸಿದ ಆಕೃತಿಗಳಿಗೆ ಗಂಧ, ಕುಂಕುಮ, ಹೂವು, ಹಚ್ಚಿ ಸಿಂಗರಿಸುತ್ತಾರೆ. ಈ ಆಕೃತಿಗಳನ್ನು 'ಅವ್ವ – ತಾತಾ' ಎಂದು ಕರೆಯುತ್ತಾರೆ. ಇವುಗಳ ಮುಂದೆ ಅವರು ಬಳಸುತ್ತಿದ್ದ ವಸ್ತುಗಳನ್ನು ಇಡುತ್ತಾರೆ. ನಂತರ ಮೂರು ಎಡೆಗಳನ್ನು ಹಾಕುತ್ತಾರೆ. ಈ ಎಡೆಯಲ್ಲಿ ಸುಕಿನುಂಡೆ, ಕಜ್ಜಾಯ, ವಡೆ, ಬಜ್ಜಿ, ಅನ್ನ ಸಾರು ಇತ್ಯಾದಿಗಳು ಇರುತ್ತವೆ. ಕೆಲವರು ಮಾಂಸಾಹಾರಿಗಳನ್ನು ಎಡೆಹಾಕುತ್ತಾರೆ. ಮೂರು ಎಡೆಗಳಲ್ಲಿ ಒಂದನ್ನು ತೆಗೆದು ಮನೆ ಮೇಲೆ ಹಾಕುತ್ತಾರೆ. ಕಾಗೆ ಬಂದು ತಿಂದ ಮೇಲೆ ಮಂಗಳಾರತಿ ಮಾಡಿ ಉಳಿದಿರುವ ಎರಡು ಎಡೆಗಳಲ್ಲಿ ಒಂದು ಎಡೆಯನ್ನು ಹಂಚಿಕೊಂಡು ಇನ್ನೊಂದನ್ನು ಅಲ್ಲೇ ಬಿಡುತ್ತಾರೆ. ಈ ಆಚರಣೆ ಸಾಮಾನ್ಯವಾಗಿ ಮಹಾಲಯ ಅಮಾವಾಸ್ಯೆದಿನ ನಡೆಯುವ 'ಪಿತೃಪಕ್ಷ' ಆಚರಣೆಯಂತೆ ಇರುತ್ತದೆ.

ಆದರೆ ಮದುವೆ ಸಂದರ್ಭದಲ್ಲಿ ಮಾಡುವ ಈ ಆಚರಣೆಗೆ 'ವಂಡ ಮಾತದಿ' ಎನ್ನುವ ಪದ ಬಳಸುತ್ತಾರೆ. ಮದುವೆ ಮನೆಯಲ್ಲಿ ಮಾತ್ರ ಈ ಆಚರಣೆ ನಡೆಯುವುದರಿಂದ ಆದಿನ ಊರಿನಲ್ಲಿರುವ ಜಾತಿಯವರಿಗೆಲ್ಲಾ ಊಟಕ್ಕೆ ಹಾಕುತ್ತಾರೆ.

## 6. ಶಕುನಗಳು :

ಸಾಮಾನ್ಯವಾಗಿ ಹೆಣ್ಣು ನೋಡಲಿಕ್ಕೆ ಹೋಗುವ ದಿನದಿಂದ ಪ್ರಾರಂಭವಾಗುವ ಈ ಶಕುನಗಳು ಮದುವೆ ದಿನದ ತನಕ ಚಾಲ್ತಿಯಲ್ಲಿರುತ್ತದೆ. ಸಾಮಾನ್ಯವಾಗಿ ಒಪ್ಪಂದಕ್ಕೆ ಹೋಗುವಾಗ ಎದುರಾಗಿ ಒಂಟಿ ಬ್ರಾಹ್ಮಣ ಸಿಗಬಾರದು, ಬೆಕ್ಕು ಅಡ್ಡ ಬರಬಾರದು, ರಕ್ತ ಕಾಣಬಾರದು, ಇತ್ಯಾದಿ ಅಪಶಕುನಗಳಾಗಿರುತ್ತವೆ. ಹಾಗೆ ಎದುರಿಗೆ ಹೂ ಬಂದರೆ, ತುಂಬಿದ ಕೊಡ ಬಂದರೆ, ಗರುಡ ಕಾಣಿಸಿಕೊಂಡರೆ, ಈಶಾನ್ಯ ಮೂಲೆಯಲ್ಲಿ ಗೌಳಿ ನುಡಿದರೆ ಶುಭ ಸೂಚನೆಗಳಾಗಿರುತ್ತವೆ. ಒಪ್ಪಂದ ವೀಳ್ಯ ಮುಗಿದು ಮದುವೆ ಮನೆಯಾದರಂತೂ ಇಡೀ ಮನೆಯ ಮೂಲೆ ಮೂಲೆಯು ಅರ್ಥಪಡೆದು ಕೊಳ್ಳುತ್ತದೆ. ಆದ್ದರಿಂದ ಈ ಸಂದರ್ಭದಲ್ಲಿ ಮಧುಮಗಳನ್ನು ಹೊರಗೆ ಹೋಗಲು ಹೆಚ್ಚು ಬಿಡುವುದಿಲ್ಲ. ಒಟ್ಟಾರೆ ಮದುವೆ ಮುಗಿಯುವ ತನಕ ಮನೆಯ ಯಜಮಾನ-ಯಜಮಾನಿ ಪ್ರತಿಯೊಂದು ಶಬ್ದ, ದೃಶ್ಯಗಳಿಗೂ ಅರ್ಥಕಲ್ಪಿಸಿ ಆಸೆ, ನಿರಾಸೆ ಪಡುವುದಂತೂ ಉಂಟು. ಹಾಗೊಮ್ಮೆ ಅಪಶಕುನಗಳು ಹೆಚ್ಚಾದರೆ ಶಾಸ್ತ್ರದವರನ್ನು ಕರೆಸಿ ಶಾಸ್ತ್ರ ಕೇಳುವುದು ತಪ್ಪಿದಲ್ಲಿ ಸಪ್ಪುಕಾಣಿಕೆ ಕಟ್ಟುವುದು, ಶಾಂತಿ ಮಾಡಿಸುವುದು ನಡೆಯುತ್ತದೆ. ಒಟ್ಟಾರೆ ಮದುಮಗನ, ಹೆಣ್ಣು-ಗಂಡು ಅಪಶಕುನಗಳಿಗೆ ಬಲಿಯಾಗದಂತೆ ಬೇಕಾದ ಎಚ್ಚರಿಕೆ ವಹಿಸುವುದು ಕುಟುಂಬದ ಹಿರಿಯರ ಕರ್ತವ್ಯವಾಗಿರುತ್ತದೆ.

# 7. ಕಳಸ

ಮೊದಲು 'ಕಳಸ' ಸಿದ್ಧಪಡಿಸುವುದರ ಮೂಲಕ ಮದುವೆಯ ಕಾರ್ಯಗಳು ಪ್ರಾರಂಭವಾಗುತ್ತದೆ.

ಒಂದು ತಾಮ್ರದ ತಟ್ಟೆಯಲ್ಲಿ ಚಿಕ್ಕದೊಂದು ಕನ್ನಡಿ, ಒಂದು ಗಿಂಡಿ ಚೆಂಬಿಗೆ ನೀರು ತುಂಬಿ ಅದರ ಮೇಲೆ ತೆಂಗಿನಕಾಯಿ(ಜುಟ್ಟು ಮೇಲೆ ಮಾಡಿ) ಇಟ್ಟಿರುತ್ತಾರೆ. ನಡುವೆ ಹಸಿರು ಮಾವಿನ ಎಲೆಗಳನ್ನು ಸಿಕ್ಕಿಸುತ್ತಾರೆ. ಸಾಮಾನ್ಯ ಎಲ್ಲಾ ಜನಾಂಗದಲ್ಲೂ 'ಕಳಸ' ಸಾಮಾನ್ಯವಾಗಿ ಇದೇ ರೀತಿ ಇರುತ್ತದೆ. ಆದರೆ ಈ ಜನಾಂಗ ಕಳಸದ ತಟ್ಟೆಯಲ್ಲಿ ಇರುವ ಇತರ ವಸ್ತುಗಳು ಗಮನಾರ್ಹವಾದವು. ಒಂದು ಬಿದಿರಿನ ಮಾನದಲ್ಲಿ ಭತ್ತ ತುಂಬಿ ಅದಕ್ಕೆ ದಬ್ಬಳ ನಟ್ಟು ದಬ್ಬಳದ ತುದಿಗೆ ಸಿಕ್ಕಿಸುವ ಮರದ ತುಂಡು, ಅವರ ಕುಲ ಕಸುಬಾದ ವ್ಯಾಪಾರವನ್ನು ಸಂಕೇತಿಸುತ್ತವೆ. ಆದ್ದರಿಂದ ವ್ಯಾಪಾರ ಸಮೃದ್ಧಿಯಾಗಲಿ ಎಂಬುದು ಇವರ ಆಶಯವಾಗಿರಬಹುದು.

ಮದುವೆಯ ಎರಡನೆ ದಿನದ ಎಲ್ಲಾ ಆಚರಣೆ – ಮೆರವಣಿಗೆ – ಶಾಸ್ತ್ರಗಳೆಲ್ಲಾ 'ಕಳಸ' ದ ನೇತೃತ್ವದಲ್ಲೇ ನಡೆಯುತ್ತದೆ. ಇದರ ಬಗ್ಗೆ ಬಹಳ ಪವಿತ್ರವಾದ ನಂಬಿಕೆ ಇರುವುದರಿಂದ 'ಕಳಸ' ವನ್ನು ಮುತ್ತೈದೆಯರು ಮಾತ್ರ ತೆಗೆದು ಕೊಳ್ಳುತ್ತಾರೆ. ಚಪ್ಪರದ ದಿನ ಹೆಣ್ಣಿನ ಮನೆಯವರು 'ಕಳಸ' ವನ್ನು ಎತ್ತಿ ಕೊಳ್ಳುತ್ತಾರೆ. ಧಾರೆ ದಿವಸ (ಮುಹೂರ್ತದ ದಿನ) ಗಂಡಿನ ಮನೆಯವರು 'ಕಳಸ' ವನ್ನು ಎತ್ತಿಕೊಳ್ಳುತ್ತಾರೆ. ಇವರು ಕಳಸಕ್ಕೆ 'ಗಂಡಗರಿ' ಎನ್ನುವ ತೆಲುಗು ಪದವನ್ನು ಬಳಸುತ್ತಾರೆ.

'ಕಳಸ' ಮದುವೆಯಂತು ಎಲ್ಲ ಕಾರ್ಯಗಳಿಗೂ ಚಾಲನೆ ತಂದು ಕೊಡುವ ಎಲ್ಲ ಓಡಾಟಗಳನ್ನು ಆಚರಣೆಗಳನ್ನು ಪವಿತ್ರಗೊಳಿಸುವ ಸಾಧನವಾಗಿದೆ. ನೀರಿನ ಚೆಂಬು, ಅದರ ಮೇಲಿಟ್ಟ ತೆಂಗಿನಕಾಯಿ, ಎರಡು ಪ್ರತ್ಯೇಕ ಸಂಬಂಧಗಳನ್ನು ಸೂಚಿಸುತ್ತದೆ. ಹಾಗೆ ಎರಡು ಪ್ರತ್ಯೇಕ ಸಂಬಂಧಗಳನ್ನು ಬೆಸೆಯುವ ಸಂಕೇತವಾಗಿ 'ಕಳಸ' ತನ್ನ ಪ್ರಾಧಾನ್ಯತೆಯನ್ನು ಉಳಿಸಿಕೊಂಡಿದೆ.

## 8. ಮದುವೆ :

ಒಂದು ಗ್ರಾಮ ಸಮುದಾಯದಲ್ಲಿ ವಿವಾಹ ಪೂರ್ವದ ಇಷ್ಟೆಲ್ಲಾ ಆಚರಣೆಗಳಿಂದ 'ಮದುವೆ ಮನೆ' ಎನ್ನುವ ಪ್ರತ್ಯೇಕತೆ ಹಾಗೂ ಸಣ್ಣ – ಬಣ್ಣ ಅಲಂಕಾರಗಳಿಂದ ಒಂದು ಕಳೆ ಬಂದಿರುತ್ತದೆ. ಒಟ್ಟು ಸಮೂಹಕ್ಕೆ ಚಪ್ಪರದಿನ ಹಾಗೂ ಮುಹೂರ್ತದ ದಿನ ಸಂಭ್ರಮದ ದಿನಗಳಾಗಿರುತ್ತವೆ. ಮೊದಲೇ ಹೇಳಿದಂತೆ ಈ ಮುಹೂರ್ತ ಹಾಗೂ ಚಪ್ಪರ ದಿನಗಳನ್ನು ಊರಿನ ಪುರೋಹಿತರು(ಬ್ರಾಹ್ಮಣರು) ಅಥವಾ ಪೋಸ್ಸವು(ವೈಷ್ಣವ)ರು ಪಂಚಾಂಗ ನೋಡಿ ನಿರ್ಧರಿಸುತ್ತಾರೆ. ಇವರ ಮದುವೆಗಳು ಸಹ ಹಿಂದೂ ಸಂಪ್ರದಾಯದಂತೆ ಜ್ಯೇಷ್ಠ – ವೈಶಾಖ ತಿಂಗಳಲ್ಲಿ ನಡೆಯುತ್ತದೆ. ಕೆಲವೊಮ್ಮೆ ಶಿವರಾತ್ರಿ ಹಬ್ಬದ ಹಿಂದು – ಮುಂದಿನ ಶುಭ ಲಗ್ನಗಳಿಗೆ ಪರಿಗಣಿಸಿ ಮಾಡುತ್ತಾರೆ.

ಜನಾಂಗದ ಹಿರಿಯರನ್ನು ಕೇಳಿದರೆ ನಮ್ಮ ಮದುವೆ ಐದು ದಿನ ನಡೆಯಿತು ಎನ್ನುತ್ತಾರೆ. ಆದರೆ ಈಗ ಎಲ್ಲ ಮದುವೆಗಳು ಎರಡು ದಿನ ಮಾತ್ರ ನಡೆಯುತ್ತವೆ. ಚಪ್ಪರ ದಿನವನ್ನು ಸ್ತಂಭ ಮುಹೂರ್ತವೆಂದು ದೇವತಾ ಕಾರ್ಯಗಳ ದಿನವೆಂದು ಕರೆಯುತ್ತಾರೆ. ಮಾಂಗಲ್ಯ ಧಾರಣೆಯ ದಿನವನ್ನು ಧಾರ ಮುಹೂರ್ತ ಅಥವಾ ಮಾಂಗಲ್ಯ ದಿನವೆಂದು ಕರೆಯುತ್ತಾರೆ.

ಮದುವೆಯ ಹಿಂದಿನ ದಿನ ಮಾಡುವ ಆಚರಣೆಗಳಲ್ಲಿ ಹೆಣ್ಣಿಗೆ ಬಳ್ಳಾಳಗಿತ್ತಿ ವೇಷ ಹಾಕಿ ಸೂತಕ ಕಳೆದು ಕುಲಸ್ಥೆಯಾಗಿ ಮಾಡುವ ಆಚರಣೆ ಈ ಜನಾಂಗದಲ್ಲಿ ಮಾತ್ರ ಕಂಡು ಬರುವ ವಿಶಿಷ್ಟ ಆಚರಣೆಯಾಗಿದೆ. ಈ ವಿಷಯ ಮುಂದಿನ ಅಧ್ಯಾಯದಲ್ಲಿ ಗಮನಿಸಬಹುದು. ಉಳಿದಂತೆ ಆಚರಣೆಗಳು ಸಾಮಾನ್ಯವಾಗಿ ಇತರ ಜನಾಂಗಗಳಲ್ಲಿ ಕಂಡು ಬರುವ ಆಚರಣೆಗಳ ಹೋಲಿಕೆಯನ್ನು ಗುರುತಿಸಬಹುದು.

'ಸಾಮಾನ್ಯವಾಗಿ ಮದುವೆಯ ಹಿಂದಿನ ದಿನ ನಡೆಯುವ ಎಲ್ಲಾ ಆಚರಣೆಗಳೂ ಮದುಮಗ-ಳನ್ನು ಸಾಮಾನ್ಯ ಜೀವನ ಕ್ರಮದಿಂದ ಪ್ರತ್ಯೇಕಿಸುತ್ತದೆ ಮತ್ತು ಹಾಗೆ ಪ್ರತ್ಯೇಕಿಸುವುದರಿಂದಾಗಿ ಮಾತ್ರ ಸಾಮಾನ್ಯ ಜೀವನ ಕ್ರಮದಲ್ಲಿ ಅವರು 'ಅಸಾಮಾನ್ಯರಾಗಿ' ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಳ್ಳುತ್ತಾರೆ. ಇದು ಸ್ಪಷ್ಟವಾಗಲು ಅವರಿಗೆ ಸ್ನಾನ ಮಾಡಿಸುತ್ತಾರೆ, ಬಿಳಿ ಬಟ್ಟೆ ಉಡಿಸುತ್ತಾರೆ. ಗಂಡಿಗೆ ಕ್ಷೌರ ಮಾಡಿಸುತ್ತಾರೆ. ಪಟ್ಟ ಬಾಸಿಂಗ ಕಟ್ಟುತ್ತಾರೆ, ಮುಂಡಾಸು ಕಟ್ಟುತ್ತಾರೆ, ಮತ್ತು ಆಗಾಗ ಶೋಭಾನೆಗಳನ್ನು ಹಾಕಿ ಅವರನ್ನು ಪುರಾಣಿಗಳ ಎತ್ತರಕ್ಕೆ ಕೊಂಡೊಯ್ಯುತ್ತಾರೆ(ಪುರುಷೋತ್ತಮ ಬಿಳಿಮಲೆ ಪುಟ 104—1990) ಮೇಲಿನ ಮಾತುಗಳು ಈ ಜನಾಂಗ ಮದುವೆಗೂ ಅನ್ವಯಿಸುತ್ತದೆ. ಆದರೆ ಈ ಜನಾಂಗದಲ್ಲಿ ಮೇಲೆ ಹೇಳಿದ ಮುಂಡಾಸು ಮತ್ತುವಾದಾಗಲಿ, ಬಿಳಿಬಟ್ಟೆ ತೊಡಿಸುವುದಾಗಲಿ ಕಂಡು ಬರುವುದಿಲ್ಲ. ಆದರೆ ಭಿನ್ನವಾದ ಹಾಗೂ ಆ ಸಂಸ್ಕೃತಿಯನ್ನು ಪ್ರತಿನಿಧೀಕರಿಸುವ ಕೆಲವು ವಿಶಿಷ್ಟವಾದ ಆಚರಣೆ ಈ ಜನಾಂಗದಲ್ಲಿ ಕಂಡು ಬರುತ್ತದೆ. ಅವುಗಳನ್ನೆಲ್ಲಾ ಈಗ ವಿವರವಾಗಿ ನೋಡಬಹುದು.

## 8. 1. ಮದುವೆ ಹೆಣ್ಣು(ಮದುಮಗಳು) ಮದುವೆ ಗಂಡು(ವರ) ಕರೆತರುವ ಶಾಸ್ತ್ರ:

ಸಾಮಾನ್ಯವಾಗಿ ಹೆಣ್ಣಿನ ಮನೆಯವರೇ 'ಮದುವೆ' ಮಾಡುವುದು ಕಂಡು ಬರುತ್ತದೆ. ಗಂಡಿನ ಮನೆಯವರು ಪರವೂರಿನವರಾಗಿದ್ದರೆ, ಚಪ್ಪರದ ದಿನ ಸಾಯಂಕಾಲದ ಹೊತ್ತಿಗೆ ಮದುಮಯ ಊರನ್ನು(ಹೆಣ್ಣಿನ ಊರನ್ನು) ಸೇರುತ್ತಾರೆ. ಊರಿಗೆ ಬಂದವರು ಊರಿನ ಚಾವಡಿಯಲ್ಲೋ, ದೇವಸ್ಥಾನದಲ್ಲೋ ಬಂದು ಇಳಿದುಕೊಳ್ಳುತ್ತಾರೆ. ಹೀಗೆ ಚಾವಡಿ:ದೇವಸ್ಥಾನದಲ್ಲಿ ಇಳಿದುಕೊಂಡ ಹೆಣ್ಣು:ಗಂಡಿನ ಕಡೆಯವರಿಗೆ ಮದುವೆ ಮನೆಯಿಂದ ಮೊದಲು ಉಪ್ಪಿಟ್ಟು:ಕಾಫಿ ಇತ್ಯಾದಿ ಕಳುಹಿಸುತ್ತಾರೆ. ಅವರು ಉಪಹಾರವನ್ನು ಮುಗಿಸಿದ ನಂತರ ಶುಭಗಳಿಗೆಯನ್ನು ನೋಡಿಕೊಂಡು ಹೆಣ್ಣಿನ ಕಡೆಯ ಐದು ಮಂದಿ ಮುತ್ತೈದೆಯರು ಐದು ತಟ್ಟೆಗಳನ್ನು ತುಂಬಿಕೊಂಡು 'ಕಳಸ' ದ ತಟ್ಟೆ

ಯನ್ನು ಮುಂದೆ ಬಿಟ್ಟುಕೊಂಡು ವಾದ್ಯ ಸಮೇತ ಗಂಡು ಕರೆಯುತ್ತಾ ಬರುತ್ತಾರೆ. ಚಾವಡಿ:ದೇವಸ್ಥಾನದಲ್ಲಿ ಉಳಿದುಕೊಂಡ ಗಂಡು ಮಾವನ ಮನೆಯಿಂದ ಬಂದ ವಸ್ತ್ರಗಳನ್ನು ಹೂವು — ಗಂಧ ಇತ್ಯಾದಿಗಳನ್ನು ಪಡೆದು ಅಲಂಕಾರಗೊಂಡು ಮದುವೆ ಮನೆಗೆ ಕಳಸ, ಮುಂದಿಟ್ಟುಕೊಂಡ ಮುತ್ತೈದೆಯರ ತಟ್ಟೆಗಳ ಸಮೇತ ವಾದ್ಯಗಳೊಡನೆ ಮೆರವಣಿಗೆ ಹೊರಡುತ್ತಾನೆ. ಹುಡುಗ ಮದುವೆ ಚಪ್ಪರದ ಕೆಳಗೆ ಬಂದಾಗ ಹೊಸ್ತಿಲ ಮುಂದೆ ನಿಲ್ಲಿಸಿ 'ರತನೀರಿನ' ಇಳಿ ತೆಗೆದು ಆರತಿ ಮಾಡುತ್ತಾರೆ. ಸಾಮಾನ್ಯ ಹುಡುಗಿಯ ತಮ್ಮ — ತಂಗಿಯರು ಆರತಿ ಮಾಡುತ್ತಾರೆ. ಆರತಿ ಮಾಡಿದ ತಟ್ಟೆಗೆ ವರ ದಕ್ಷಿಣೆ ಹಾಕುತ್ತಾನೆ. ನಂತರ ಬಲಗಾಲಿನಿಂದ ಹೊಸ್ತಿಲು ದಾಟಿಸಿ ಮನೆ ತುಂಬಿಸಿಕೊಳ್ಳುತ್ತಾರೆ. ಹೀಗೆ ಮದುವೆ ಮನೆಯನ್ನು ಪ್ರವೇಶಿಸಿದ ಹುಡುಗ|ಗೆ ಒಂದು ಪ್ರತ್ಯೇಕ ಕೋಣೆ ಇರುತ್ತದೆ. ಹುಡುಗ|ಗಿ ಮನೆ ತುಂಬಿದ ಮೇಲೆ ಮುತ್ತೈದೆಯರು ಕಂಬ ಶಾಸ್ತ್ರದ ಕಡೆ ನಡೆಯುತ್ತಾರೆ.

## 8.2. <u>ಕಂಬಶಾಸ್ತ್ರ:</u>

ಚಪ್ಪರ ದಿನ ಬಹಳ ಮುಖ್ಯವಾದ ಶಾಸ್ತ್ರವಾಗಿರುತ್ತದೆ. ಇನ್ನು ಹಸಿರಾಗಿರುವ ಹಾಲು ತುಂಬಿದ ಕಳ್ಳಿ ಕಂಬವನ್ನು ಶಾಸ್ತ್ರಕ್ಕೆ ಸರಿಯಾಗಿ ತರಿಸಿಕೊಂಡಿರುತ್ತಾರೆ. ಈ ಕಂಬ ನಾಲ್ಕೈದು ಅಡಿ ಎತ್ತರದಿರುತ್ತದೆ. ಕಂಬದ ತುದಿಯಲ್ಲಿ ಐದು ಕೊನೆ ಇರಬೇಕು. ಇದನ್ನು 'ಹಾಲುಕಂಬ' ಎಂದೂ 'ಸಾಕ್ಷಿ ಕಂಬ' ಎಂದು ಕರೆಯುತ್ತಾರೆ. ಈ ಕಂಬ ಮದುವೆ ಮಂಟಪದಲ್ಲಿ ಮೂರ್ತಗೊಳ್ಳಬೇಕು. ಇದನ್ನು ಮೂರ್ತಿಕರಿಸುವ ಮೊದಲು ಹೆಣ್ಣು|ಗಂಡು ಕಡೆಯ ಐದು ಮಂದಿ ಮುತ್ತೈದೆಯರು ಹೊಸ ಮೊರ ಗಳನ್ನು ತೆಗೆದುಕೊಂಡ(ಮೊರ ಖಾಲಿ ಇರಬಾರದೆಂದು ಬೀಳ್ಯ ಇಡುತ್ತಾರೆ) ಹುತ್ತದ ಮಣ್ಣಿಗಾಗಿ ಹೊರಗೆ ಹೋಗುತ್ತಾರೆ. ಹುತ್ತವನ್ನು ಪೂಜೆ ಮಾಡಿ ಅಲ್ಲಿಯಿಂದ ಒಬ್ಬೊಬ್ಬ ಮುತ್ತೈದೆಯೂ ಎರಡೆರಡು ಸಾರಿ ಮಣ್ಣನ್ನು ತಂದು ಮದುವೆ ಮಂಟಪಕ್ಕೆ

ಹಾಕುತ್ತಾರೆ. ಮದುವೆ ಮಂಟಪದಲ್ಲಿ ಅದನ್ನು ಹರಡಿ ಅದರ ಮೇಲೆ ಐದು ಮಂದಿ ಯಜಮಾನರು ಸೇರಿ ಕಂಬವನ್ನು ಮುಹೂರ್ತ ಮಾಡುತ್ತಾರೆ. ಹೀಗೆ ಮೂರ್ತೀಕರಿಸುವಾಗ ಐದು ಕೊನೆಯಿರುವ ಹಾಲು-ಕಂಬದ ತುದಿಗೆ ನವ ಧಾನ್ಯಗಳನ್ನು ಅರಿಶಿನ ಸುತ್ತಿದ ಬಟ್ಟೆಯಲ್ಲಿ ಸುತ್ತಿ ತುದಿಗೆ ಕಟ್ಟುತ್ತಾರೆ. ನಂತರ ಕಂಬಕ್ಕೆ ಹೂವು ಗಂಧ ಹಚ್ಚಿ ಪೂಜೆ ಮಾಡುತ್ತಾರೆ.

ಈ ಕಂಬ ಗಂಡು:ಹೆಣ್ಣಿನ ಸಂಬಂಧಕ್ಕೆ ಸಾಕ್ಷಿಯಾಗಿ ಇರುತ್ತದೆ ಎನ್ನುವ ನಂಬಿಕೆಯಿದೆ.

## 8.3: ತೇಟು – ತಕ್ಕ (ಎಪಾಟಿ ವಂಶ)

ಈ ಜನಾಂಗದಲ್ಲಿ ಬಾಲ್ಯವಿವಾಹ ಮತ್ತು ವಿಧವಾ ವಿವಾಹ ಪದ್ಧತಿಗಳು ಕಳೆದ 20 ವರ್ಷಗಳ ತನಕ ನಡೆದುಕೊಂಡು ಬಂದಿದೆ. ಈ ತರ ವಿವಾಹವಾದ ಮನೆತನಗಳು ನಾಲ್ಕು ತಲೆಮಾರಿನ ತನಕ 'ತಕ್ಕ' (ಕಡಿಮೆ ಅಥವಾ ಕೀಳು) ವಂಶವಾಗುತ್ತವೆ. ಇಂಥ ವಂಶಗಳಿಗೆ 'ಎಪಾಟಿ ವಂಶ' ವೆಂದು ಕರೆಯುತ್ತಾರೆ. ಹೆಗ್ಗಡ ದೇವನಕೋಟೆ ತಾಲ್ಲೂಕ್ ನಾಗರ ಮತ್ತು ಗುಂಡ್ಲುಪೇಟೆ ತಾಲ್ಲೂಕ್ ಹೊಸೂರಿನಲ್ಲಿ ಈಗಲೂ ಈ ಮನೆತನಗಳಿವೆ. 'ಬಾಲ್ಯ ವಿವಾಹವಾಗಿ ಹುಡುಗಿ ಮೈ ನೆರೆಯುವ ಮೊದಲೇ ಆಕೆಯ ಗಂಡ ಸತ್ತು ಹೋದರೆ ಅವಳಿಗೆ ಒಂದು ಗಂಡು ನೋಡಿ ಹಿರಿಯರ ಸಮ್ಮುಖದಲ್ಲೇ ದೇವಸ್ಥಾನದಲ್ಲಿ ಕೂಡಾವಳಿ ಮಾಡುತ್ತಾರೆ (ಸುಬ್ಬಶೆಟ್ಟಿ, ನಾಗರ) ಇವರಿಗೆ ಹುಟ್ಟಿದ ಮಕ್ಕಳು ನಾಲ್ಕು ತಲೆಮಾರಿನ ತನಕ ಕೀಳು ವಂಶವಾಗುತ್ತಾರೆ. ತಕ್ಕ ಕುಲದ ಗಂಡುಗಳಿಗೆ ತೇಟು (ಹೆಚ್ಚು ಕುಲ) ವಂಶದ ಮುತ್ತೈದೆಯರು ಮದುವೆಯ ಹಿಂದಿನ ಮಾಡುವ ಶಾಸ್ತ್ರವಾದ 'ನಲುಗಿಸುವ ಶಾಸ್ತ್ರ' ಮಾಡುವುದಿಲ್ಲ. ಹಾಗೂ ಈ ಕುಲದ ಹೆಂಗಸರು ದೇವತಾ ಕಾರ್ಯಗಳಲ್ಲಿ ಕಳಸ – ಕುಂಭ ಇತ್ಯಾದಿಗಳನ್ನು ಹಿಡಿಯುವ ಹಾಗಿಲ್ಲ. ಮದುವೆ ಸಂದರ್ಭದಲ್ಲಿ ಈ ಕುಲದ ಹೆಣ್ಣು – ಗಂಡು ಭಾಗವಹಿಸಿದವರೂ ಈ ಕಾರ್ಯಗಳನ್ನು ಮಾಡಬಾರದೆಂದು ಪೂರ್ವ ನಂಬಿಕೆಯಿದ್ದರೂ ಸದ್ಯದಲ್ಲಿ ತೇಟು – ತಕ್ಕ ತಕರಾರುಗಳನ್ನು ಗೌಣಗೊಳಿಸಿ ಕೊಡುವ – ತರುವ ಸಂಬಂಧವಿಟ್ಟುಕೊಂಡಿದ್ದಾರೆ.

ಹೆಣ್ಣನ್ನು ಕೊಡುವ – ತರುವ ವಿಚಾರದಲ್ಲಿ ಅಂದರೆ 'ಒಪ್ಪು ವೀಳ್ಯ' ಕೊಡುವಾಗ 'ಮೊಪ್ಪುಂಗೂಡು' (ಒಪ್ಪಿದ ಊಟ) ಮಾಡುವಾಗ ತೇಟು–ತಕ್ಕದ ವಿಚಾರಗಳನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಮಗಳನ್ನೋ – ಮಗನನ್ನೋ 'ಎಪಾಟಿ ವಂಶ' ದವರಿಗೆ ಕೊಡಲು ಒಪ್ಪಿಕೊಳ್ಳುತ್ತಾರೆ. ಈ ಕಾರಣ ಜನಾಂಗದ

ಅರ್ಧದಷ್ಟು ಜನ ತೆಲ್ಬಾಗಿ(ಮೇಲಾಗಿ) ಇನ್ನರ್ಧದಷ್ಟು ಜನ ತಕ್ಕ(ಕೀಳಾಗಿ) ಹೋಗಿದ್ದಾರೆ. ತೀರ ಅಲ್ಪ ಸಂಖ್ಯಾತರಾದ್ದರಿಂದ ಈ ತರದ ಹೊಂದಾಣಿಕೆ ಸಹಜವಾಗಿ ಬೆಳೆದುಬಂದಿದೆ. ಆದರೆ ಈ ಸಮಸ್ಯೆ ಉಂಟಾಗುವುದು ಮದುವೆಯ ಹಿಂದಿನ ಮುತ್ತೈದೆಯರು ಮಾಡುವ 'ನಲುಗಿಸುವ ಶಾಸ್ತ್ರ'ದ ಸಂದರ್ಭದಲ್ಲಿ ತೆಲ್ಬು(ಮೇಲು) ವಂಶದ ಮುತ್ತೈದೆಯರು ತಕ್ಕ(ಕೀಳು) ವಂಶದ ಗಂಡಿಗೂ:ಹೆಣ್ಣಿಗೂ ಶಾಸ್ತ್ರ ಮಾಡಲು ನಿರಾಕರಿಸುತ್ತಾರೆ. ಮಗಳನ್ನು ಹುಡುಗನಿಗೆ ಕೊಟ್ಟು ಅಳಿಯನಾಗಿ ಮಾಡಿಕೊಳ್ಳುವುದು ಅಥವಾ ಹುಡುಗಿಯನ್ನು ತಂದು ಸೊಸೆಯಾಗಿ ಮಾಡಿಕೊಳ್ಳುವುದು ಇಲ್ಲಿನ ವಾಸ್ತವ ಸಂಗತಿಯಾದರೂ ಗಂಡು:ಹೆಣ್ಣಿಗೆ ನಲುಗಿಸುವ ಶಾಸ್ತ್ರ ಮಾಡದೇ ನಿರಾಕರಿಸುವ ಮೂಲಕ ತಮ್ಮ ತೆಲ್ಬುತನವನ್ನು ಮೆರೆಯುತ್ತಾರೆ. ಇಲ್ಲಿ ಹುಡುಗ! ಹುಡುಗಿ ಕೀಳು ವಂಶ ಎಂಬುದನ್ನು ನಿರಾಕರಿಸುತ್ತಲೇ ಅಳಿಯ!ಸೊಸೆಯಾಗಿ ಒಪ್ಪಿಕೊಳ್ಳುತ್ತಾರೆ. ಆಚರಣೆಗಳ ಮೂಲಕ ತೋರಿಸುವ ನಿರಾಕಾರಗಳು, ಬದುಕಿನ ವಾಸ್ತವತೆಯಲ್ಲಿ ಸ್ವೀಕಾರ ಪಡೆಯುತ್ತಾ ಹೋಗುತ್ತವೆ. ಈ ಜನಾಂಗ ಅನೇಕ ಆಚರಣೆಗಳಲ್ಲಿ ಈ ವೈರುಧ್ಯಗಳು ಇರುವುದನ್ನು ಗಮನಿಸಬಹುದು. ಮುಂದೆ 'ಬೆಳ್ಳಾಳಗಿತ್ತಿ ವೇಷ' ಎನ್ನುವ ಭಾಗದಲ್ಲಿ ಇದೇ ತರದ ವಿಪರ್ಯಾಸವನ್ನು ಕಾಣುತ್ತೇವೆ. ಒಂದು ಅಲೆಮಾರಿ ಜನಾಂಗ ಭಿನ್ನ ಸಂಸ್ಕೃತಿಗಳ ನಡುವೆ ತನ್ನನ್ನು ತಾನು ಗುರುತಿಸಿಕೊಳ್ಳುವುದು ಹಾಗೂ ಹೊಂದಾಣಿಕೆ ಮಾಡಿಕೊಳ್ಳುವುದು ಎರಡು ಪ್ರವೃತ್ತಿಯನ್ನು ಈ ಜನಾಂಗದಲ್ಲಿ ಕಾಣುತ್ತೇವೆ.

## 8.4 ನಲುಗಿಸುವ ಶಾಸ್ತ್ರ :

ಇದೊಂದು ಬಹಳ ಸೂಕ್ಷ್ಮವಾದ ಶಾಸ್ತ್ರ. ಈ ಶಾಸ್ತ್ರದ ಸಂದರ್ಭದಲ್ಲಿ ಹಿಂದೆಂದೂ ಕಾಣದ 'ತೇಟು – ತಗ್ಗು' ವಿಚಾರಗಳು ಬಂದು ಇಡೀ ಮದುವೆ ಮನೆಯೇ ಗದ್ದಲವಾಗಿ ಬಿಡುತ್ತದೆ. ನಲುಗಿಸುವ ಶಾಸ್ತ್ರವೆಂದರೆ ಹೆಣ್ಣು ಗಂಡಿನ ಮನೆಯ ಐದು ಜನ ಮುತ್ತೈದೆಯರು ಬಂದು ವರ:ವಧುವಿಗೆ ಹಾಲು, ಎಣ್ಣೆ, ಗಂಧ – ಅರಿಸಿಣ ಹಚ್ಚಿ ಸ್ನಾನಕ್ಕೆ ಸಿದ್ಧಪಡಿಸುವುದು. ಹೆಣ್ಣು:ಗಂಡಿಗೆ ತಲೆಗೆ ಎಣ್ಣೆ, ಹಾಲು ಹಚ್ಚುತ್ತಾರೆ. ನಂತರ ಕಾಲುಕೈಗಳಿಗೆ ಅರಿಸಿಣ,ಗಂಧ ಪೂಸುತ್ತಾರೆ. ನಂತರ ಕಳಸ ಮುಂದಿಟ್ಟು ಕೊಂಡು ಸ್ನಾನದ ಮನೆಗೆ ಕರೆದುಕೊಂಡು ಹೋಗಿ ಒನಕೆಯ ಮೇಲೆ ಕುಳ್ಳಿರಿಸಿ ಐದು ಜನ ಮುತ್ತೈದೆಯರು ಐದು ಸಾರಿ ನೀರುಹಾಕಿ ಸ್ನಾನ ಮಾಡಿಸುತ್ತಾರೆ. ಇದು ಸಹ ಹೆಂಗಸರು ಮಾತ್ರ ಮಾಡುವ ಶಾಸ್ತ್ರ.

ತೇಟು– ತಗ್ಗು(ಮೇಲು – ಕೀಳು) ವಿಚಾರಗಳು ಈ ಶಾಸ್ತ್ರದ ಸಂದರ್ಭದಲ್ಲಿ ತಟಕ್ಕನೆ ಉದ್ಭವಿಸುತ್ತವೆ. ಹೆಂಗಸರಷ್ಟೆ ಸೇರಿ ಮಾಡುವ ಶಾಸ್ತ್ರವಾದ್ದರಿಂದ ಕುಲದ ಹೆಂಗಸರು ತಮ್ಮ ಪವಿತ್ರತೆಯನ್ನು ಪ್ರದರ್ಶಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಮೇಲಾದ(ತೇಟು)ಹೆಣ್ಣಿನ ಕಡೆಯವರಿರಬಹುದು, ಗಂಡಿನಕಡೆಯವರಿರಬಹುದು. ಅವರು ಕೀಳಾದ(ತಗ್ಗು) ಗಂಡ:ಹೆಣ್ಣಿಗೆ ಶಾಸ್ತ್ರ ಮಾಡಲು(ನಲುಗಿಸಲು) ನಿರಾಕರಿಸುತ್ತಾರೆ. ಇದುವರೆಗೆ ಯಾವ ಆಚರಣೆಯಲ್ಲೂ ಕಾಣಿಸಿಕೊಳ್ಳದ ಸಂಗತಿ ಈಗ ಹೊರಬರುತ್ತದೆ. ಕುಲದ ಯಜಮಾನರುಗಳಿಗೆ ತೇಟು – ತಗ್ಗು ವಂಶಗಳು ಗೊತ್ತಿದ್ದರೂ ಆ ವಿಚಾರಗಳನ್ನು ಗೌಣಗೊಳಿಸಿ ಕಲ್ಯಾಣವನ್ನು ಏರ್ಪಡಿಸುತ್ತಾರೆ. ಬಹಳ ಅಲ್ಪಸಂಖ್ಯಾತರಾದ ಇವರು ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದರೆ ಎಷ್ಟೋ ಮನೆತನದ ಹೆಣ್ಣು:ಗಂಡುಗಳಿಗೆ ಮದುವೆಗಳೇ ಸಾಧ್ಯವಾಗದೆ ಹೋಗಬಹುದು. ಈ ಕಾರಣ ಹಿರಿಯ ಯಜಮಾನರು ಇತಿಹಾಸವನ್ನು ವಾಸ್ತವಕ್ಕೆ ಅನುಗುಣವಾಗಿ ರಚಿಸಿಕೊಂಡು ಮೇಲುಕೀಳು ಎಂಬ ತಾರತಮ್ಯವನ್ನು ಮಾಡದೇ ಸಂಬಂಧ ಬೆಳೆಸುತ್ತಾರೆ. ಆದರೆ ಕುಲದ ಹೆಂಗಸರು ಆ ಸಂದರ್ಭದಲ್ಲಿ ಇದನ್ನು ಒಪ್ಪಿ ಕೊಂಡಿದ್ದರೂ ನಲುಗಿಸುವ ಶಾಸ್ತ್ರದ ಸಂದರ್ಭದಲ್ಲಿ ತಾತ್ಕಾಲಿಕವಾದ ಈ ಜಗಳ ತೆಗೆಯುತ್ತಾರೆ. ಇದು ಸ್ತ್ರೀಯರು ತಮ್ಮ ಅಸ್ತಿತ್ವವನ್ನು ಪ್ರತಿನಿಧಿ ಸುವ ಪ್ರಯತ್ನವೂ ಆಗಿರಬಹುದು. ಒಟ್ಟಾರೆ ಹೀಗೆ ಶಾಸ್ತ್ರ ನಿರಾಕರಿಸಿ ಕುಂತ ಹೆಂಗಸಿಗೆ ಅವಳ ಗಂಡ ಬಂದು ಸಮಾಧಾನಪಡಿಸಿ ಅಥವಾ ಬೆದರಿಸಿ ಶಾಸ್ತ್ರ ಮಾಡಿಸುತ್ತಾನೆ. ನಂತರ

ಶಾಸ್ತ್ರ ಮುಗಿದು ಹುಡುಗಿ ಸ್ನಾನಕ್ಕೆ ಹೋಗುತ್ತಾರೆ. ಇತ್ತೀಚಿನ ಮದುವೆಗಳಲ್ಲಿ ಇದೊಂದು ಸಾಮಾನ್ಯ ಸಂಗತಿಯಾಗಿ ಈ ತರದ ಜಾಳವು ಆ ಸಂಸ್ಕೃತಿಯ ಒಂದು ಭಾಗದಂತೆ ಸೇರಿಕೊಂಡಿದೆ.

ಮೇಲಾದ (ತೇಲುವಂಶ) ವಂಶದವರು ಹುಡುಗಿಯನ್ನು ಕೀಳಾದ ವಂಶದ (ತಕ್ಕವಂಶದ) ಅಳಿಯನನ್ನಾಗಿ:ಸೊಸೆಯನ್ನಾಗಿ ಬಹಳ ಗೌರವದಿಂದಲೇ ಒಪ್ಪಿಕೊಂಡಿರುತ್ತಾರೆ. ಆದರೆ ಆ ಶಾಸ್ತ್ರದ ಗಳಿಗೆಯಲ್ಲಿ ಮಾತ್ರ ಒಬ್ಬ ಸಮುದಾಯಕ್ಕೆ ತಮ್ಮ ಅಸ್ತಿತ್ವದ ಗಮನ ಸೆಳೆಯುತ್ತಾರೆ. ಅಂದರೆ ಹುಡುಗಿಯನ್ನು ಅಳಿಯ:ಸೊಸೆಯನ್ನಾಗಿ ಒಪ್ಪಿಕೊಳ್ಳುತ್ತಲೆ 'ಶಾಸ್ತ್ರ ಮಾಡುವುದಿಲ್ಲ' ಎನ್ನುವ ಮೂಲಕ ನಿರಾಕರಿಸುತ್ತಾರೆ. ಅಂದರೆ ಇವರು ಸ್ವೀಕಾರದ ನೆಲೆಗಳು — ನಿರಾಕಾರದ ನೆಲೆಗಳು ಎರಡು ವಿಭಿನ್ನ ಧೋರಣೆಯಾಗಿದ್ದರೂ ವಾಸ್ತವದಲ್ಲಿ ಎರಡನ್ನೂ ಸರಿಯಾಗಿ ಹೊಂದಿಸಿಕೊಳ್ಳುವ ವಿಪರ್ಯಾಸಗಳು ಈ ಸಂಸ್ಕೃತಿಯ ಒಂದು ವಿಶೇಷ ಲಕ್ಷಣವಾಗಿ ಕಂಡು ಬರುತ್ತದೆ. ಮುಂದೆ ಬೆಳ್ಳಾಳಗಿತ್ತಿ ಶಾಸ್ತ್ರದಲ್ಲೂ ಈ ಪ್ರವೃತ್ತಿಯನ್ನು ಗಮನಿಸಬಹುದು. ಮೂಲತಃ ಅಲೆಮಾರಿಗಳಾದ ಇವರು ಕಾಲದ ಸ್ಥಿತ್ಯಂತರಗಳಲ್ಲಿ ಹೇಗೆ ತಮ್ಮ ಸಂಸ್ಕೃತಿಯನ್ನು ಹಿಗ್ಗಿಸಿ-ಕುಗ್ಗಿಸಿಕೊಂಡು ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ಎಂಬುದಕ್ಕೆ ಈ ತರದ ಶಾಸ್ತ್ರಗಳು ಬಹಳ ಮುಖ್ಯವಾದ ಸಂಗತಿಗಳಾಗಿವೆ.

## 8.5 ಕಂಕಣ ಶಾಸ್ತ್ರ :

ಹೆಣ್ಣು:ಗಂಡಿನ ಸೋದರಮಾವನ ಸಮ್ಮುಖದಲ್ಲಿ ಕುಲದ ಯಜಮಾನ:ಹಿರಿಯ ಈ ಶಾಸ್ತ್ರವನ್ನು ಮಾಡುತ್ತಾನೆ. ಗಂಡು – ಹೆಣ್ಣಿನ ಕಡೆಯಲ್ಲಿ ಪ್ರತ್ಯೇಕವಾಗಿ ಈ ಶಾಸ್ತ್ರ ನಡೆಯುತ್ತದೆ. ಒಂದು ಅರಿಸಿನದ ಕೊನೆಯನ್ನು ಕಂಬಳಿ ದಾರದಲ್ಲಿ ಕಟ್ಟಿ ಅದನ್ನು ಹೂವು ಗಂಧ ಹಚ್ಚಿ ಪೂಜೆ ಮಾಡುತ್ತಾರೆ. ನಂತರ ಅದು ಹೊರಗೆ ಕಾಣದಂತೆ ಅರಿಸಿನ ಬಟ್ಟೆಯನ್ನು ಸುತ್ತುತ್ತಾರೆ. ಕಂಕಣ ಕಟ್ಟಿದ ವೇಳೆ ವರ:ವಧು ಇತರರಿಗಿಂತ ಭಿನ್ನವಾಗಿ ಪ್ರತ್ಯೇಕಗೊಳ್ಳುತ್ತಾರೆ. ನಂತರ ಹುಡುಗ:ಗಿ ಹಸಿಮೈನವರಾಗುತ್ತಾರೆ. ಹೀಗೆ ಚಪ್ಪರದಿನವೇ ಈ ಕಾರ್ಯ ಮಾಡುತ್ತಾರೆ. ಕಂಕಣ ಬಿಚ್ಚುವವರೆಗೂ ಅವನು ಒಬ್ಬೊಬ್ಬನೇ ಹೊರಗೆ ಹೋಗುವುದು ಸಾಧ್ಯವಿಲ್ಲ. ಹಾಗೊಮ್ಮೆ ಹೋಗಬೇಕಾದಲ್ಲಿ ಅವನ ಕೈಗೊಂದು ಕತ್ತಿಕೊಟ್ಟು ಕಳುಹಿಸುತ್ತಾರೆ. ಈ ಕತ್ತಿಗೆ ಅರಿಸಿನಬಟ್ಟೆ ಸುತ್ತಿ ತುದಿಗೊಂದು ನಿಂಬೆಹಣ್ಣು ಸಿಕ್ಕಿಸಿರುತ್ತಾರೆ. ಹಸಿಮೈಗೆ ಹೊರಗಿನ ಕೆಟ್ಟ ಶಕ್ತಿಗಳು ಸುಲಭವಾಗಿ ದಾಳಿ ಮಾಡುತ್ತವೆ ಎನ್ನುವ ನಂಬಿಕೆ ಇಮದು. ಆಕಾರಣ ವರ:ವಧುವನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ.

ಕಂಕಣ ಕಟ್ಟುವಾಗ ವರ:ವಧುವಿನ ಕೈಯನ್ನು ನೆಲದ ಮೇಲೆ ಇಟ್ಟ ನೀರು ತುಂಬಿದ ಚೆಂಬಿನ ಮೇಲೆ ಇಟ್ಟು ಕಟ್ಟುತ್ತಾರೆ. ನೀರು ಈ ಎಲ್ಲ ಸಂಬಂಧಗಳನ್ನು ಬೆಸೆಯುವಲ್ಲಿ ಮಧ್ಯವರ್ತಿಯಾಗಿ ಕೆಲಸ ನಿರ್ವಹಿಸುತ್ತದೆ. ಪಂಚಭೂತಗಳಲ್ಲಿ ನೀರು ಒಂದಾದ್ದರಿಂದ ಅದರ 'ಸಾಕ್ಷಿ' ಯಾಗಿ ಕಂಕಣ ಕಟ್ಟುತ್ತಾರೆ. ಕಂಕಣ ಕಟ್ಟಿದ ವೇಳೆ ವರನಿಂದಲೇ ಬಲಗೈಗೆ ಪೂಜೆ ಮಾಡಿಸುತ್ತಾರೆ.

## 8.6 ಸೀಕನೂಳ್ ತರುವ ಶಾಸ್ತ್ರ :



ಹೀಗೆ ಮುತ್ತೈದೆಯರಿಂದ ಮುಟ್ಟಿಸಿಕೊಂಡು ಅವರ ಜಗಳ ತಕರಾರುಗಳನ್ನು ಕಂಡ ಹುಡುಗ ಆ ದಿನ ಸ್ನಾನವಮಾಡಿಸಿಕೊಂಡು ತತ್ತರಿಸಿ ಹೋಗುತ್ತಾನೆ. ಅನೇಕ ಹುಡುಗರು ತಮ್ಮ ಜಾತಿ ಮೂಲಗಳನ್ನೇ ಬೈದಾಡಿಕೊಳ್ಳುವುದುಂಟು. ಅಲ್ಲಿಗೆ ಹುಡುಗನಿಗೆ ಮಾಡುವ ಆ ದಿನದ ಶಾಸ್ತ್ರಗಳೆಲ್ಲ ಮುಗಿಯುತ್ತದೆ.



ಆದರೆ ಹುಡುಗಿಗೆ ಮಾಡುವ ಶಾಸ್ತ್ರಗಳು ಮತ್ತು ಹೆಂಗಸರುಗಳ ಶಾಸ್ತ್ರ ಇಡೀ ರಾತ್ರಿ ನಡೆಯುತ್ತದೆ. ಇದರಲ್ಲಿ ಇನ್ನೊಂದು ಮುಖ್ಯವಾದ ಶಾಸ್ತ್ರ 'ಸೀಕ ನೂಳ್ ತರುವ' ಶಾಸ್ತ್ರ 'ಸೀಕನೂಳ್' ಎಂದರೆ 'ಸೂತಕ ಕಳೆಯುವ ನೀರು' ಎಂದರ್ಥ. ಆ ರಾತ್ರಿ ಹೆಣ್ಣು – ಗಂಡಿನ ಕಡೆಯ ಮುತ್ತೈದೆಯರು ಕಳಸ ಮುಂದೆ ಇಟ್ಟುಕೊಂಡು ವಾದ್ಯ ಸಮೇತ ಊರ ಕೆರೆಗೆ ಹೋಗಿ ಸೂತಕ ಕಳೆಯುವ ನೀರು ತರುತ್ತಾರೆ. ಈ ಸೂತಕ ಹೇಗೆ ಬಂತು? ಎಂಬುದಕ್ಕೆ 'ದಂಡಿನ ಕತೆ' ಯನ್ನು ಹೇಳುತ್ತಾರೆ.(ಅನುಬಂಧದಲ್ಲಿ ತುಳುವಿನಲ್ಲಿ ಹೇಳಿದ್ದನ್ನು ಕನ್ನಡ ಲಿಪಿಯಲ್ಲಿ ಕೊಟ್ಟಿದ್ದೇನೆ) ಕತೆಯ ಸಾರಾಂಶವೆಂದರೆ ಪೂರ್ವದಲ್ಲಿ ಈ ಜನಾಂಗ ಯಜಮಾನರು ದಂಡಿಗೆ ಹೋಗುವ ಪ್ರಸಂಗ ಬಂತು. ಆಗ ಕುಲದ ಗಂಡಸರು ತಮ್ಮ ಪತ್ನಿಯರನ್ನು ಕರೆದು 'ನಾವು ದಂಡಿಗೆ ಹೋಗುತ್ತಿದ್ದೇವೆ ದಂಡಿನಲ್ಲಿ ವಿಜಯಿಗಳಾದರೆ ಹಿಂತಿರುಗುತ್ತೇವೆ. ಸೋತು ವೀರ ಮರಣ ಅಪ್ಪಿದರೆ ನಮ್ಮೊಡನೆ ಇರುವ ಈ ನಾಯಿಗಳು ಮಾತ್ರ ಹಿಂತಿರುಗುತ್ತವೆ. ನಾಯಿಗಳು ಬಂದರೆ ನಾವು ಮರಣ ಹೊಂದಿದ್ದೇವೆ ಎಂದು ತಿಳಿದು ಬೆಂಕಿಗೆ ಹಾರಿ ಸತೀ ಮಾಡಿಕೊಳ್ಳಬಹುದು ಎಂದು ಹೇಳಿ ದಂಡಿಗೆ ಹೋದರಂತೆ. ದಂಡಿನಲ್ಲೇ ಇವರೇ ವಿಜಯಿಗಳಾದರು.'ಈ ವಿಜಯೋತ್ಸವವನ್ನು ವನದಲ್ಲಿ ಆಚರಿಸುವ ಸಂದರ್ಭದಲ್ಲಿ ತಮ್ಮೊಡನಿದ್ದ ನಾಯಿಗಳನ್ನು ಮರೆತು ಬಿಟ್ಟರಂತೆ. ಆಗ ನಾಯಿಗಳು ನೇರ ಊರಿಗೆ ಬಂದು ಬಿಟ್ಟವು. ಇದನ್ನು ಕಂಡು ಕುಲದ ಹೆಂಗಸರು ಬೆಂಕಿಗೆ ಹಾರಿ 'ಸತೀ' ಮಾಡಿಕೊಂಡರಂತೆ

ಆದ್ದರಿಂದ . ಸ್ತ್ರೀ ಸಂಕಟ ಇಲ್ಲದ ಹಾಗೆ ಆಯ್ತು. ಸಂತಾನಕ್ಕಾಗಿ ಇವರು ಬೆಳ್ಳಗಿತ್ತಿಯನ್ನು ತಂದು ಮದುವೆ ಮಾಡಿಕೊಂಡರು. ಈ ಕಾರಣ ಹೆಣ್ಣು ಮದುವೆ ಆಗುವ ತನಕ ಬೆಳ್ಳಗಿತ್ತಿಯಾಗಿರುತ್ತಾಳೆ. ನಂತರ ಅವಳನ್ನು ಕುದಂ ನೀರು ತಂದು ಸೂತಕ ಕಳೆದು ಜಾತ್ಯಸ್ಥಳನ್ನಾಗಿ ಮಾಡಿಕೊಳ್ಳುತ್ತಾರೆ. ಈ ಆಚರಣೆ ಪೂರಕವಾಗಿ ಬೆಳ್ಳಗಿತ್ತಿ ವೇಷ ಹಾಕುವ ಆಚರಣೆಯು ಬರುತ್ತದೆ.

## 8.7 ಬೆಳ್ಳಗಿತ್ತಿ ವೇಷ :

ಹೆಣ್ಣಿನ 'ಬೆಳ್ಳಗಿತ್ತಿ ವೇಷ' ಹಾಕುವ ಹೊತ್ತಿಗೆ ಆದಿನದ ಇತರ ಶಾಸ್ತ್ರಗಳೆಲ್ಲ ಮುಗಿದು ಅರ್ಧ ರಾತ್ರಿಯಾಗಿರುತ್ತದೆ. ಈ ಶಾಸ್ತ್ರವನ್ನು ಉದ್ದೇಶ ಪೂರಕವಾಗಿಯೇ ಅರ್ಧರಾತ್ರಿಯಲ್ಲಿ ಮಾಡುತ್ತಾರೋ ಅಥವಾ ಇತರ ಶಾಸ್ತ್ರಗಳೆಲ್ಲ ಮುಗಿಯುವ ಹೊತ್ತಿಗೆ ಅರ್ಧರಾತ್ರಿ ಆಗುತ್ತದೆಯೋ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಒಟ್ಟಿನಲ್ಲಿ ಇದೊಂದು ಸೂತಕ ಕಳೆಯುವ ಶಾಸ್ತ್ರ ಎಂಬುದಂತೂ ಬಹಳ ಮುಖ್ಯವಾದ ಹಾಗೂ ಈ ಜನಾಂಗದವರಲ್ಲಿ ಮಾತ್ರ ಕಂಡು ಬರುವ ಶಾಸ್ತ್ರ ಹುಡುಗಿಗೆ ಸಾಮಾನ್ಯವಾಗಿ ಕೆಂಪುಬಣ್ಣದ ಸೀರೆ ಉಡಿಸಿ, ಎಡಗಡೆಗೆ ಸೆರಗು ಹಾಕುತ್ತಾರೆ. ಕೂದಲನ್ನು ಹಿಂದ ಗಂಟಾಕಿ(ಜಡೆ ಹಾಕುವುದಿಲ್ಲ) ಅದಕ್ಕೆ ಹೂವಿನಿಂದ ಅಲಂಕಾರಗೊಳಿಸುತ್ತಾರೆ. ಕೈಯಲ್ಲಿ ತಾಮ್ರ ಚಂಬುಕೊಡುತ್ತಾರೆ. ನಂತರ ಅವಳನ್ನು ಸೋದರ ಮಾವ ಮಂಟಪಕ್ಕೆ ಕರೆದುಕೊಂಡು ಬಂದು ಐದು ದಿಕ್ಕುಗಳಿಗೆ ವೀಳ್ಯದೆಲೆಗಳಿಂದ ಅರ್ಘ್ಯ ಬಿಡಿಸುತ್ತಾನೆ. ನಂತರ ಕಳಸ ಸಮೇತ ಅವಳು ತನ್ನ ಕೋಣೆಗೆ (ಆಚಿಡ್ಡ ಇಲ್ಲು) ಬಿಟ್ಟು ಬರುತ್ತಾನೆ. ಅವಳು ಆ ದಿನ ತನ್ನ ಬೆಳ್ಳಗಿತ್ತಿ ವೇಷ ಕಳೆದು ನಾಳೆ ಕುಲ ವಧುವಾಗಿ ಮುಹೂರ್ತಕ್ಕೆ ತಯಾರಾಗಬೇಕು. ಇಲ್ಲಿಗೆ ಮದುವೆ ಹಿಂದಿನ ದಿನದ ಶಾಸ್ತ್ರವೆಲ್ಲ ಮುಗಿಯುತ್ತದೆ.

'ಸೀಕನೂಳೆ ಶಾಸ್ತ್ರ' (ಸೂತಕ ಕಳೆವ ನೀರು) 'ಬೆಳ್ಳಗಿತ್ತಿ ವೇಷ' ಹಾಕುವ ಶಾಸ್ತ್ರ ಈ ಜನಾಂಗದಲ್ಲಿ ಜಾತಿ ಸಂಕರ ನಡೆದಿದೆ ಎಂಬುದನ್ನು ಬಹಳ ಸ್ಪಷ್ಟವಾಗಿ ತಿಳಿಸುತ್ತದೆ. ಇದಕ್ಕೆ ಪೂರಕವಾಗಿ ದಂಡಿನ ಕತೆಯೂ ಇದೆ.

ತನ್ನ ಸಂತಾನಕ್ಕಾಗಿ ಮತ್ತೊಂದು ಜಾತಿಯ ಹೆಣ್ಣನ್ನು ತಂದುಕೊಂಡು ಮದುವೆಯಾದದ್ದು, ಈ ಜನಾಂಗದ ವೈದಿಕ ವಿಕಾಸ ಶೀಲತೆಯನ್ನು ತೋರಿಸುತ್ತದೆ. ಹೀಗೆ ತಂದು ಕೊಂಡದ್ದು 'ಸೂತಕ' ಮಾಯ್ತು ಎನ್ನುವ ಪುರುಷ ಪ್ರಧಾನ ಸಂಸ್ಕೃತಿಯ ಪ್ರಭಾವದಿಂದ ಉಂಟಾಗಿರಬಹುದೋ ಎನ್ನುವ ಅನುಮಾನ ಉಂಟಾಗುತ್ತದೆ. ಏಕೆಂದರೆ ತಮಿಳು ನಾಡಿನಲ್ಲಿರುವ 24 ಮನೆ ತೆಲುಗು ಚೆಟ್ಟಿಯಾರ್‌ಗಳಲ್ಲಿ 'ದಂಡಿನಕತೆಯು' ವಿವರವಿದ್ದರೂ 'ಬೆಳ್ಳಗಿತ್ತಿ ವೇಷ' ಹಾಕುವ ಪದ್ಧತಿಯಿಲ್ಲ. ಇದು ಕರ್ನಾಟಕದಲ್ಲಿರುವ 14 ಗ್ರಾಮದ 24 ಮನೆ ತೆಲುಗು ಶೆಟ್ಟಿಗಳ ಮಾತ್ರ ಕಂಡು ಬರುತ್ತದೆ.

ಇನ್ನೊಂದು ಸಂಗತಿಯೆಂದರೆ 'ಬೆಳ್ಳಗಿತ್ತಿ ವೇಷ' ಹಾಕುವುದು ಇವರಿಗೊಂದು ಸಂಭ್ರಮದ ಆಚರಣೆ ಅದನ್ನು ಕಳೆಯುವುದು ಇನ್ನೊಂದು ಆಚರಣೆ. ಅಂತರಜಾತಿ ವಿವಾಹ ಆಗಿದೆ ಎನ್ನುವುದು 'ಬೆಳ್ಳಗಿತ್ತಿ ' ವೇಷ ಹಾಕುವ ಮೂಲಕ 'ಸ್ವೀಕರಿಸುವ' ಸಂಗತಿ. ಸೂತಕ ಕಳೆಯುವುದು ನಿರಾಕರಿಸುವ ಸಂಗತಿ. ಹೀಗೆ ಸ್ವೀಕಾರ, ನಿರಾಕಾರಗಳು ಈ ಜನಾಂಗದಲ್ಲಿ ಏಕಕಾಲಕ್ಕೆ ಕಂಡುಬರುವ ಸಾಂಸ್ಕೃತಿಕ ವೈರುಧ್ಯವಾಗಿದೆ.

## 9. ಮುಹೂರ್ತ (ಧಾರೆದಿನ)

ಇತರ ಜನಾಂಗಗಳ ಹಾಗೆ ಇವರಿಗೂ ಮುಹೂರ್ತದ ದಿನ ಬಹಳ ಪವಿತ್ರವಾದ ದಿನವಾಗಿರುತ್ತದೆ. ಎರಡು ಮನೆತನಗಳ ಸಂಬಂಧ ಗಂಡು – ಹೆಣ್ಣಿನ ಸಂಬಂಧ ಈದಿನ ಮುಹೂರ್ತಗೊಳ್ಳುವ ದಿನವಾಗಿರುತ್ತದೆ. ಈ ಕಾರಣ ಮನೆಮಂದಿ ನೆಂಟರಿಷ್ಟರು ಎಲ್ಲ ಸೇರುತ್ತಾರೆ. ಗಂಡು – ಹೆಣ್ಣಿನ ಮನೆಯವರೆಲ್ಲಾ ಸ್ನಾನಮಾಡಿ ಹೊಸಬಟ್ಟೆಗಳನ್ನು ಧರಿಸುತ್ತಾರೆ. ಗಂಡಿಗೆ ಈ ದಿನ ಧಾರಾಮುಹೂರ್ತವಾಗಿ ಎಲ್ಲ ಕ್ರಿಯಾ ವಿಧಿಗಳು ಮುಗಿಯುವ ತನಕ ಹಿಂದಿನ ದಿನದಂತೆ ಉಪಾಹಾರ ಮುಂದುವರಿಯುತ್ತದೆ. ಸಾಮಾನ್ಯವಾಗಿ ಬಿಳಿ ಉಡುಗೆಗಳನ್ನಷ್ಟೆ ಹುಡುಗ ಧರಿಸುತ್ತಾನೆ. ಮುಹೂರ್ತದ ಹೊತ್ತಿಗೆ ರೇಷ್ಮೆ ವಸ್ತ್ರ ಧರಿಸುತ್ತಾನೆ. ಹುಡುಗಿಗೆ ಗಂಡಿನ ಮನೆಯವರು ಧಾರೆ ಸೀರೆ ತರುವ ಪದ್ಧತಿಯಿದೆ. ಹಾಗೆ ಹುಡುಗನ ಮನೆಯವರೇ 'ಹೆಣ್ಣಿಗೆ' ತಾಳಿ ಮಾಡಿಸುತ್ತಾರೆ. ಧಾರೆ ಸೀರೆ 'ಅರಿಸಿನ ಬಣ್ಣದ' ಸೀರೆಯಾಗಿರುತ್ತದೆ. ಒಂದು ವರ್ಷದೊಳಗೆ ಈ ಸೀರೆಯನ್ನು ಹುಟ್ಟು ಹರಿದಾಕಬೇಕು ಎಂಬ ನಂಬಿಕೆಯಿರುವುದರಿಂದ ಕಡಿಮೆ ಬೆಲೆ ಸೀರೆಯನ್ನೇ ತೆಗೆಯುತ್ತಾರೆ. ಹುಡುಗನ ತಂದೆ ಹುಡುಗಿಯ ತಂದೆ ಬಿಳಿವಸ್ತ್ರಧಾರಿಗಳಾಗಿ ನೆಂಟರಿಷ್ಟರನ್ನೆಲ್ಲಾ ಸಂತೋಷ ಸಂಭ್ರಮದಿಂದ ಬರಮಾಡಿಕೊಳ್ಳುತ್ತಾರೆ. ಹೊಸ ಉಡುಗೆ – ತೊಡುಗೆಗಳಿಂದ ಅಲಂಕಾರಗೊಂಡ ಮನೆಯವರು – ನೆಂಟರಿಷ್ಟರು, ಹಸಿರು ತೋರಣಗಳಿಂದ ಅಲಂಕಾರಗೊಂಡ ಮನೆ, ಮಂಗಳವಾದ್ಯಗಳು ಹೊಸ ಸಂಭ್ರಮತಂದು ಇಡೀ ಮನೆಗೆ ಮದುವೆ ವಾತಾವರಣ ತುಂಬಿಕೊಳ್ಳುತ್ತದೆ.

## ದೇವರು ತರೋ ಶಾಸ್ತ್ರ:

ಈ ಶುಭ ದಿನ ಪ್ರಾರಂಭವಾಗೋದು ಮೊದಲು ಗಂಗೆಯನ್ನು (ದೇವರು) ತಂದು ಮನೆ ತುಂಬಿಸಿಕೊಳ್ಳುವುದರಿಂದ. ಯಥಾ ಪ್ರಕಾರ 'ಕಳಸ' ವನ್ನು ಕೈಗೆತ್ತಿಕೊಳ್ಳುವುದರಿಂದ ಶುಭ ದಿನದ ಕಾರ್ಯಗಳಿಗೆ ಚಾಲನೆ ಸಿಗುತ್ತದೆ. ಮರುದಿನ ದಿನ ಕಡೆಯ ಮುತ್ತೈದೆಯರು ಈಗಾಗಲೇ ಕುಂಬಾರರಿಂದ ಪಡೆದ ಮಣ್ಣಿನ ಕುಂಭಗಳನ್ನು ಕೈಯಲ್ಲಿ ಹಿಡಿದು ಊರ ಕೆರೆಯ ಕಡೆ ಮೆರವಣಿಗೆ ಹೊರಡುತ್ತಾರೆ. (ಹಿಂದೆ ಚಪ್ಪರದ ದಿನ ಕುಂಬಾರ ಮನೆಗೆ ಹೋಗಿ ಕುಂಭಗಳನ್ನು, ಹಣತೆ(ದೀಪ)ಗಳನ್ನು ಪಡೆದು ಕುಂಬಾರರಿಗೆ ವೀಳ್ಯ ದಕ್ಷಿಣೆಗಳನ್ನು ಕೊಡುತ್ತಿದ್ದರು. ಕುಂಬಾರ ಮಡಿಕೆ ಮೇಲೆ ಬಣ್ಣದ ಚಿತ್ರಗಳನ್ನು ಬಿಡಿಸಿ, ಅವುಗಳನ್ನು ಪೂಜೆ ಮಾಡಿ ಹರಸಿಕೊಡುತ್ತಿದ್ದನಂತೆ. ಈಗ ಊರಲ್ಲಿ ಮಡಿಕೆ ಮಾಡುವ ಕಾಯಕವೇ ಮರೆಯಾಗುತ್ತಿರುವುದರಿಂದ ಮಡಕೆಯನ್ನು ಹುಡುಕಿಕೊಂಡು ಬೇರೆ ಊರುಗಳಿಗೆ ಹೋಗಿ ತರುತ್ತಾರೆ. ಕೆಲವರು ಸ್ಟೀಲ್ ಚೆಂಬುಗಳನ್ನೇ ದೇವರು ತರೋದಕ್ಕೆ ಬಳಸುತ್ತಾರೆ.) ಕೆರೆಯ ದಡದಲ್ಲಿ ಜಾತಿಯ ಹಿರಿಯ: ಯಜಮಾನ ಎಲ್ಲ ಮಡಿಕೆಗಳನ್ನು ಇಟ್ಟು ಗಂಗೆ ಪೂಜೆ ಮಾಡಿ ನಂತರ ಮಡಿಕೆ ತುಂಬುತ್ತಾನೆ. ತುಂಬಿದ ಮಡಿಕೆಗಳಿಗೆ ಹೂವು – ಗಂಧ ಹಚ್ಚಿ ಪೂಜೆ ಮಾಡುತ್ತಾನೆ. ಮುತ್ತೈದೆಯರು ಭಕ್ತಿ ಗೌರವಗಳಿಂದ ತಮ್ಮ ತಲೆಗಳ ಮೇಲೆ ಹೊತ್ತುಕೊಂಡು ಊರ ದಾರಿಯಲ್ಲಿ ಮೆರವಣಿಗೆ ಹೊರಡುತ್ತಾರೆ. ಹೀಗೆ ಮೆರವಣಿಗೆ ಹೊರಟಾಗ ಮುಂದೆ ವಾದ್ಯದವರು ಇರುತ್ತಾರೆ. 'ಕಳಸ' ಮುಂದಿಟ್ಟುಕೊಂಡ ದೇವರುಗಳು(ದೇವರು ಹೊತ್ತವರು) ಅಗಸ ಹಾಸುವ ನಡೆಮುಡಿಯ ಮೇಲೆ ಸಾಗುತ್ತಾರೆ. ಅಗಸರು ಬಟ್ಟೆಪಂಜುಗಳನ್ನು (ದೊಂದಿ) ಉರಿಸುತ್ತಾರೆ. ಈ ಮೆರವಣಿಗೆ ಅತ್ಯಂತ ಆಕರ್ಷಣೀಯ ಮಹತ್ವದ ಮೆರವಣಿಗೆ ಆಗಿರುತ್ತದೆ. ತಮ್ಮ ದೇವರುಗಳನ್ನು ಮನೆತುಂಬಿ ಕೊಳ್ಳುವ ನಂಬಿಕೆಗೆ ಅನುಗುಣವಾಗಿ ನಡೆಯುತ್ತದೆ. ಹೀಗೆ ಮಂಗಳ ವಾದ್ಯಗಳ ಸಮೇತ ಹೋಗುವಾಗ ದೇವರು ಹೊತ್ತವರ ಮೇಲೆ 'ಗಣ' ಬರುವುದು ಉಂಟು.

ಮದುವೆ ಮಾಡುವ ಮನೆಯ ಹಿರೀಕ ಆ ದೇವರ ಮಾತುಗಳನ್ನು ಆಲಿಸಿ ಅವರು ಹೇಳಿದಕ್ಕೆ ಒಪ್ಪಿ ವೀಳ್ಯ ಕೊಟ್ಟು ಒಲೈಸಿ ಮನೆ ತುಂಬಿಕೊಳ್ಳುತ್ತಾನೆ. 'ದೇವರು' ಮದುವೆ ಮನೆ ತಲುಪಿದ ಮೇಲೆ ಚಪ್ಪರದ ಕೆಳಗೆ ಹಸಮಣೆ ಹಾಕಿ ಸಾಲಾಗಿ ಕುಳ್ಳಿಸಿ 'ಆರತಿ' ತೆಗೆದು ಒಳಗೆ ಬರಮಾಡಿಕೊಳ್ಳುತ್ತಾರೆ. ಹೀಗೆ ಬರಮಾಡಿಕೊಂಡ ದೇವರು ಮದುವೆ ಮಂಟಪದಲ್ಲಿ ಮಧ್ಯದಲ್ಲಿ ಮೂರ್ತಿಗೊಳ್ಳುತ್ತದೆ. ಚಪ್ಪರದ ದಿನ ನೆಂಬ ಮೂರ್ತಿಗೊಂಡ ಸಾಕ್ಷಿಯಾಗಿದೆ ನೆಲಕ್ಕೆ ಗಂಗೆಯೂ ಬಂದು ಸೇರಿ ಕೊಳ್ಳುತ್ತಾಳೆ. ವಧು:ವರ ಕೂರುವ ಮಣೆಯ ಮುಂದೆ ಸಾಲಾಗಿ ಈ ದೇವರುಗಳನ್ನು ಇಡುತ್ತಾರೆ. ದೇವರು ಮನೆಯನ್ನು ಹೊಕ್ಕ ಮೇಲೆ ಹಣತೆ(ಮಣ್ಣಿನ ದೀಪ) ಹಚ್ಚುತ್ತಾರೆ. ಅಗ್ನಿಯೂ ಮದುವೆಗೆ ಸಾಕ್ಷಿಯಾಗಿ ಕೂಡಿಕೊಳ್ಳುತ್ತದೆ. ಸಮಸ್ತ ದೇವತೆಗಳು ಮದುವೆಗೆ ಬಂದು ಸೇರಿದ ಮೇಲೆ ವಧು:ವರರನ್ನು ಸೇರಿಸುವ ಶಾಸ್ತ್ರಗಳು ನಡೆಯುತ್ತವೆ.

## 9.2 ನಲುಗಿಸುವ ಶಾಸ್ತ್ರ : (2)

ಗಂಡು:ಹೆಣ್ಣಿನ ಕಡೆ ಮುತ್ತೈದೆಯರು ಹಾಲು – ಗಂಧ – ಎಣ್ಣೆಗಳನ್ನು ಹಿಡಿದು ಕಳಸದೊಡನೆ ಹೆಣ್ಣು:ಗಂಡಿಗೆ ನಲುಗಿಸಿ ಸ್ನಾನ ಮಾಡಿಸುವ ಶಾಸ್ತ್ರಕ್ಕೆ ನಿಲ್ಲುತ್ತಾರೆ. ಇದು ಮದುವೆಯ ಎರಡನೆಯ ಸಾರಿ ನಲುಗಿಸುವ ಶಾಸ್ತ್ರವಾಗಿರುತ್ತದೆ. ನಿನ್ನೆ ಈ ಶಾಸ್ತ್ರದ ಸಂದರ್ಭದಲ್ಲಿ ಈ ಮುತ್ತೈದೆಯರು ಗಲಾಟೆ ಮಾಡಿಕೊಂಡಿದ್ದರೇ ? ಏನನ್ನೂ ನೆನಪಿಸದ ಆಗದಷ್ಟು ಸಂಭ್ರಮದಿಂದ ಹೊಂದಾಣಿಕೆಯಿಂದ ಎರಡನೆ ದಿನದ 'ನಲುಗಿಸುವ ಶಾಸ್ತ್ರ' ನಡೆಯುತ್ತದೆ. ಮದುವೆ ಸಂದರ್ಭದಲ್ಲಿ ನಡೆಯುವ 'ಜಗಳ'ಗಳು ಎಷ್ಟು ತಾತ್ಕಾಲಿಕವಾದದ್ದು ಎಂಬುದಕ್ಕೆ ಈ ಶಾಸ್ತ್ರ ಒಳ್ಳೆಯ ಉದಾಹರಣೆಯಾಗಿರುತ್ತದೆ. ''ಜಗಳ' ಅವರ ಬದುಕಿನ ಅವಿಭಾಜ್ಯ ಅಂಶವಾಗಿ ಯಾವ ವೈಷಮ್ಯವನ್ನು ಬೆಳೆಸದೆ

ಸಹಜವಾಗಿ ಕಣ್ಮರೆಯಾಗಿ ಹೋಗಿರುತ್ತದೆ. ಈ ಕಾರಣ 'ಜಾಗ' ಮದುವೆ ಹಿಂದೆ ಮುಂದೆ ಕಾಣಿಸಿಕೊಂಡರು ಮುಹೂರ್ತದಿನ ಯಾವ ಅಪಶಕುನಗಳು ಆಗಬಾರದೆಂಬ ಬಲವಾದ ನಂಬಿಕೆ ಇವರಿಗೆ ಇರುತ್ತದೆ. ಆದ್ದರಿಂದ ತಾಳಿಕಟ್ಟುವ ತನಕ ಎಲ್ಲರೂ ಆ ದಿನವನ್ನು ಗೌರವಿಸುತ್ತಾರೆ.

ವಧು: ವರರಿಗೆ ಹಾಲು — ಗಂಧ — ಎಣ್ಣೆ ಹಚ್ಚಿ ನಲುಗಿಸುವ ಶಾಸ್ತ್ರ ವಧು: ವರರ ಕೋಣೆಯಲ್ಲಿ ನಡೆಯುತ್ತದೆ. ಈ ದಿನ ಮುತ್ತೈದೆಯರು ಪ್ರೀತಿಯಿಂದ ವಧು: ವರರ ಮೈ — ಕಾಲುಗಳನ್ನು ಗಂಧ — ಎಣ್ಣೆಯಿಂದ ತೀಡಿ ಶಾಸ್ತ್ರ ಮಾಡಿ ನಂತರ 'ಕಳಸ' ಸಮೇತ ಸ್ನಾನದ ಮನೆಗೆ ಕರೆದುಕೊಂಡು ಹೋಗಿ ಐದು ಸಾರಿ ಶಾಸ್ತ್ರೋಕ್ತವಾಗಿ ನೀರಾಕಿ ಸ್ನಾನ ಮಾಡಿಸುತ್ತಾರೆ.

## 9.3: ಹಜಾಮರ ಶಾಸ್ತ್ರ :

ವರನಿಗೆ ಸ್ನಾನ ಮಾಡಿಸುವುದಕ್ಕೂ ಮೊದಲು ಹಜಾಮನಿಂದ ಮುಡಿ ಶಾಸ್ತ್ರ ಮಾಡಿಸುತ್ತಾರೆ. ಅವನು ವರನ ಮೈ ಮೇಲಿನ ಕೂದಲನ್ನು ತೆಗೆದು ಶುಚಿ ಗೊಳಿಸುತ್ತಿದ್ದನಂತೆ. ಈಗ ಸಾಂಕೇತಿಕವಾಗಿ ಹೆಬ್ಬೆರಳಿನ ಐದು ಕೂದಲನ್ನು ಮಾತ್ರ ತೆಗೆಯುತ್ತಾನೆ. ನಂತರ ಹಾಲು — ನೀರು ಹಚ್ಚುತ್ತಾನೆ.

## 9.4 ಬಳೆ ಶಾಸ್ತ್ರ :

ಸ್ನಾನವಾದ ನಂತರ ಹುಡುಗಿಗೆ ಬಳೆಗಾರನನ್ನು ಕರೆಸಿ ಬಳೆ ತೊಡಿಸುವ ಶಾಸ್ತ್ರ ಮಾಡುತ್ತಾರೆ. 'ಬಳೆ ಶಾಸ್ತ್ರ' ಎಂಬ ಮುಹೂರ್ತದ ದಿನವೇ ನಡೆಯುತ್ತದೆ. ಈ ಸಂದರ್ಭದಲ್ಲಿ ಹುಡುಗಿಗೆ ಕಪ್ಪು ಬಳೆಗಳನ್ನು ತೊಡಿಸುತ್ತಾರೆ. ಮತ್ತು ಮುತ್ತೈದೆಯರು ಕಪ್ಪು ಬಳೆಯನ್ನು ತೊಟ್ಟು ಕೊಳ್ಳುತ್ತಾರೆ.

## 9.5 ಕಜ್ಜಾಯದ ಶಾಸ್ತ್ರ : ( ಅವಶಾಕೆ ಮಣವು)

ಒಡೆದ ಕಾಯಿಯ ಹೋಳುಗಳಿಂದ ಮತ್ತು ಕಜ್ಜಾಯಗಳಿಂದ ವಧು ವರರಿಗೆ ಈ ಶಾಸ್ತ್ರಗಳನ್ನು ಮಾಡುತ್ತಾರೆ. ಕಾಯಿ – ಕಜ್ಜಾಯವನ್ನು ಕೈಯಲ್ಲಿ ಹಿಡಿದುಕೊಂಡು ಮೇಲಿನಿಂದ ಕೆಳಗೆ ಇಳಿ ತೆಗೆಯುತ್ತಾರೆ. ಇದು ದೃಷ್ಟಿ ತೆಗೆಯುವ ಶಾಸ್ತ್ರವಾಗಿರುತ್ತದೆ.

## 9.6 ಕಾಶಿಯಾತ್ರೆ :

ಹುಡುಗ ಮಾವನೊಡನೆ ಮುನಿಸಿಕೊಂಡ ಕಾಶಿಯಾತ್ರೆಗೆ ಹೊರಟುಹೋದ ನಂತರ ಹೀಗೆ ಮುನಿಸಿಕೊಂಡು ಹೋದ ಹುಡುಗನನ್ನು ಅತ್ತೆ – ಮಾವನವರು ಬಟ್ಟೆಕೊಟ್ಟು – ಕಾಲು ಪೂಜೆ ಮಾಡಿ ಕರೆದುಕೊಂಡು ಬಂದು ಮಗಳಿಗೆ ಮದುವೆ ಮಾಡುವುದು! ಈ ನಂಬಿಕೆಗೆ ಪೂರಕವಾಗಿ ಈ ಶಾಸ್ತ್ರ ನಡೆಯುತ್ತದೆ. ಆದ್ದರಿಂದ ಹುಡುಗನಿಗೆ ಗೀರು ಗಂಧ ಹಾಕಿ, ಕಚ್ಚೆ ಪಂಚೆ ಉಡಿಸಿ ಕೈಗೆ ರೈಲುಚಂಬುಕೊಟ್ಟು ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಅನಂತರ ಅತ್ತೆ – ಮಾವ ವಾದ್ಯ ಸಮೇತ ಬಂದು ಹುಡುಗನಿಗೆ ಬಟ್ಟೆಕೊಟ್ಟು ಕಾಲುಪೂಜೆ ಮಾಡಿ ಮದುವೆ ಮನೆಗೆ ಕರೆದುಕೊಂಡು ಬಂದು ತಾಳಿಕಟ್ಟಿಸುತ್ತಾರೆ.

## 9.7 ಮಾಂಗಲ್ಯ : ಮುಹೂರ್ತ

ಕಾಶಿಯಾತ್ರೆಯನ್ನು ಮುಗಿಸಿಕೊಂಡು ಹುಡುಗ ನೇರ ಮದುವೆ ಮಂಟಪಕ್ಕೆ ಬರುತ್ತಾನೆ. ನಂತರ ಮಂಟಪದಲ್ಲಿ ನೆಟ್ಟ 'ಹಾಲುಕಂಬ' ಅಗ್ನಿ, ಕುಂಭಗಳಿಗೆ ಕಳಸ ನೀರನ್ನು ವೀಳ್ಯದೆಲೆಗೆ ಹಾಕಿಸಿ ಪ್ರದಕ್ಷಿಣೆ ಮಾಡಿಸುತ್ತಾರೆ. ಹೀಗೆ ಸಮಸ್ತ ದೇವರಿಗೂ ಅರ್ಘ್ಯಕೊಟ್ಟು ಮದುವೆ ಮಂಟಪವೇರುತ್ತಾನೆ. ಹಸಮಣೆಯ ಮೇಲೆ ಬರುವ ಕನ್ಯೆಗೆ ಅಭಿಮುಖವಾಗಿ ನಿಲ್ಲಿಸುತ್ತಾರೆ. ನಂತರ ರೇಷ್ಮೆ ಬಟ್ಟೆಯ ತೆರೆಯನ್ನು ನೀಳವಾಗಿ ಹುಡುಗನಿಗೆ (ಕನ್ಯೆಯನ್ನು ನೇರವಾಗಿ ನೋಡದಂತೆ) ಮುಚ್ಚುತ್ತಾರೆ.

ಈ ಕಡೆ ವಧುವಿನ ಸೋದರ ಮಾವ, ಸೋದರ ಅತ್ತೆ ಕಳಸವಿಡಿದು ಹುಡುಗಿಯನ್ನು ಅರಿಸಿನ ಸೀರೆ(ಧಾರೆ ಸೀರೆ) ಉಡಿಸಿ ಕರೆದುಕೊಂಡು ಬರುತ್ತಾರೆ. ಹೀಗೆ ಬಂದ ಹುಡುಗಿ ಕಂಬ, ಅಗ್ನಿ, ಕುಂಭ, ಸಮಸ್ತ ದೇವರುಗಳಿಗೆ ವೀಳ್ಯದೆಲೆಯಿಂದ ಕಳಸ ನೀರು ಹಾಕಿಸಿಕೊಂಡು ಅರ್ಘ್ಯ ಹಾಕಿ ಮಂಟಪ ಪ್ರದಕ್ಷಿಣೆ ಮಾಡಿ ಹಸೆಮಣೆಯೇರುತ್ತಾಳೆ. ನಂತರ ವಧೂವರರು ತಮ್ಮ ತಲೆಯ ಮೇಲೆ ಅಕ್ಷತೆ ಕಾಳುಗಳನ್ನು ಪರಸ್ಪರ ಸುರಿಸಿಕೊಳ್ಳುತ್ತಾರೆ. ಆಗ ಹಿರಿಯ ಯಜಮಾನ ವರನಿಗೆ ಮುಚ್ಚಿದ ತೆರೆ ಸರಿಸಿ ಕನ್ನಡಿಯ ಮೂಲಕ ವಧುವನ್ನು ನೋಡುತ್ತಾನೆ. ನಂತರ ತುಳಸಿಯಿಂದ ಕಟ್ಟಿದ ಸಂಬಂಧ ಮಾಲೆಯನ್ನು ವಧೂವರರು ಪರಸ್ಪರ ಹಾಕಿಕೊಳ್ಳುತ್ತಾರೆ. ಹಸೆಮಣೆಯ ಮೇಲೆ ವಧೂವರರೂ ಕುಳಿತುಕೊಂಡು ಮೊದಲು ಹುಡುಗಿಯ ತಂದೆ, ತಾಯಿಗಳು ಹಾಲು – ನೀರಿನಿಂದ ಧಾರೆಯೆರೆದು ಕೊಡುತ್ತಾರೆ. ಹೀಗೆ ಧಾರೆ ಎರೆಯುವಾಗ ವರ ಮತ್ತು ವರನ ತಂದೆಯ ಕೈಗಳು ಕೂಡಿರುತ್ತವೆ. ಹೀಗೆ ಕೂಡಿದ ಕೈ ಮೇಲೆ ಧಾರೆ ಎರೆಯುವವರು ಒಂದು ಕಾಯಿ, ನಾಲ್ಕಾಣೆ ಇಟ್ಟು ಧಾರೆ ಎರೆಯುತ್ತಾರೆ. ಮದುವೆ ಆಗಿರುವವರು ಹಾಗೂ ಹಿರಿಯರು ಮಾತ್ರ ಸಪತ್ನಿ ಸಮೇತರಾಗಿ ಧಾರೆ ಎರೆಯುತ್ತಾರೆ. ವಿಧವೆಯರು ತಮಗೆ ಸಾಗುವಳಿಯಾಗುವವರನ್ನು ಮುಂದಿಟ್ಟುಕೊಂಡು ಧಾರೆಯೆರೆದು ಕೊಡುತ್ತಾರೆ. ಧಾರೆ ಆದ ಮೇಲೆ ಮಾಂಗಲ್ಯವಿರುತ್ತದೆ. ಮುಹೂರ್ತಕ್ಕೆ ಸರಿಯಾಗಿ ಮಾಂಗಲ್ಯಧಾರಣೆ ಮಾಡುತ್ತಾರೆ. ಮಾಂಗಲ್ಯಕ್ಕೆ ಮೊದಲು ಒಂದು ಜುಟ್ಟು ತೆಂಗಿನಕಾಯಿಗೆ ಅರಿಸಿನ ಹಚ್ಚಿ ಅದರ ಮೇಲೆ ಮಾಂಗಲ್ಯವಿಟ್ಟು ಎಲ್ಲ ಹಿರಿಯರಿಂದಲೂ ಮುಟ್ಟಿಸುತ್ತಾರೆ. ನಂತರ ಕಾಯಿ ಒಡೆದು ಮಾಂಗಲ್ಯ ಕಟ್ಟಿಸುತ್ತಾರೆ. ಮಾಂಗಲ್ಯವಾಗುವಾಗ ನೆರೆದ ಬಂಧು ಬಳಗವೆಲ್ಲ ಎದ್ದು ನಿಂತು ಅಕ್ಷತೆಕಾಳು ಹಾಕಿ ಆಶೀರ್ವದಿಸುತ್ತಾರೆ. ಗಟ್ಟಿ ಮೇಳವಾಗುತ್ತದೆ. ವರ ತಾಳಿಯಲ್ಲಿರುವ ಸೂರ್ಯ ಚಂದ್ರವನ್ನು ಮೇಲ್ಮುಖವಾಗಿ ಇಟ್ಟುಕೊಂಡು ಮೂರು ಬ್ರಹ್ಮ ಗಂಟು ಹಾಕುತ್ತಾನೆ. ಅಲ್ಲಿಗೆ ತಾಳಿಭಾಗ್ಯ ದೊರೆತಂತೆ.

9.೫ <u>ವಧುವಿನ ಕೈ ಹಿಡಿಯುವ ಶಾಸ್ತ್ರ</u> :

ಒಂದು ತಂಬಿಗೆಯೊಳಗೆ ಹಾಲನ್ನು ತುಂಬಿ ಚಿನ್ನದ ಉಂಗುರವನ್ನು ನಾಣ್ಯವನ್ನೊ ಒಳಗೆ ಹಾಕಿ ಹೆಣ್ಣು — ಗಂಡುಗಳು ಒಟ್ಟಿಗೆ ಕೈ ಹಾಕಿ ಹುಡುಕಿ ಬೇಗ ತೆಗೆಯುವಂತೆ ಹೇಳುತ್ತಾರೆ. ಹೀಗೆ ಹುಡುಕುವಾಗ ಗಂಡು ವಧುವಿನ ಬೆರಳುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅವರ ಕೈ ಹೊರ ತೆಗೆಯಲು ಬಿಡುವುದಿಲ್ಲ. ಆಗ ಈ ಶಾಸ್ತ್ರ ಮಾಡಿಸುವ ಸೋದರ ಮಾವ ತಮಿಳಿನ ಒಂದು ನುಡಿಗಟ್ಟನು ಹೇಳುತ್ತಾನೆ.

'' <u>ಪಾಲು ಕೊಡುಕ್ಕಿರೇನ್, ಕತ್ತಿ ಕೊಡಿಕ್ಕಿರೇನ್, ಬಿಡರಾ ಮಾಪ್ಪಿಳ್ಳೈ</u> ''

ಎನ್ನುತ್ತಾನೆ. ವರ ವಧುವಿನ ಕೈ ಬಿಡುವುದಿಲ್ಲ. ಮತ್ತೊಮ್ಮೆ '' ಕತ್ತಿ, ಕೊಡಿಕ್ಕಿರೇನ್ ಕಠಾರಿ ಕೊಡಿಕ್ಕಿರೇನ್, ಬಿಡಲಾ ಮಾಪಿಳ್ಳೈ '' ಎನ್ನುತ್ತಾನೆ. ಆಗಲು ವರ ವಧುವಿನ ಕೈ ಬಿಡುವುದಿಲ್ಲ. '' ಇಕ ಒಗೆ ಬಿಡ್ಡ ಇಚ್ಚಾ ಉಡರಾ '' (ಇನ್ನೊಬ್ಬಳು ಹೆಣ್ಣು ಕೊಡುತ್ತೇನೆ. ಬಿಡು) ಎಂದಾಗ ವರ ವಧುವಿನ ಕೈ ಬಿಡುತ್ತಾನೆ. ಕೊನೆಯ ವಾಕ್ಯ ಮಾತ್ರ ತೆಲುಗಿನಲ್ಲಿ ಹೇಳುತ್ತಾನೆ. ಹಾಲು, ಕತ್ತಿ, ಕಠಾರಿಗಳಿಗೆ ಒಪ್ಪದ ವರ 'ಮತ್ತೊಂದು ಹುಡುಗಿ ಕೊಡುತ್ತೇನೆ ಬಿಡು' ಎಂದಾಗ ಬಿಡುತ್ತಾನೆ. ಅಂದರೆ ಈ ಜನಾಂಗದಲ್ಲಿ ದ್ವಿಪತ್ನಿತ್ವ ಅಥವಾ ಬಹುಪತ್ನಿತ್ವದ ಪದ್ಧತಿಗೆ ಒಪ್ಪಿಗೆ ಇತ್ತು ಎನ್ನುವುದು ಈ ಶಾಸ್ತ್ರದ ಮೂಲಕ ಮಾತ್ರ ಉಳಿಸಿಕೊಂಡು ಬಂದಿದ್ದಾರೆ. ಈ ಜನಾಂಗದಲ್ಲಿ ಮಾತ್ರ ಕಂಡು ಬರುವ ಶಾಸ್ತ್ರ ಇದಾಗಿದೆ.

9.೬ <u>ಕಂಕಣ ಬಿಚ್ಚುವ ಶಾಸ್ತ್ರ</u> :

ಧಾರೆ ಊಟ ಮುಗಿದು 'ಮುಯ್ಯಿ' ಆದ ಮೇಲೆ ವರ: ವಧುವಿಗೆ ಕೊನೆಯದಾಗಿ ಈ ಶಾಸ್ತ್ರ ಮಾಡುತ್ತಾರೆ. ವಧುವಿನ ಕೈ ಹಿಡಿಯುವ ಶಾಸ್ತ್ರ ಮುಗಿದ ನಂತರ ಕಂಕಣ ಬಿಚ್ಚುತ್ತಾರೆ. ಕಂಕಣ ಕಟ್ಟಿ, ಬಿಚ್ಚುವ ತನಕ ವಧು: ವರರು ಉಪಾಹಾರದಲ್ಲಿರುತ್ತಾರೆ. ಕಂಕಣ ಕಟ್ಟಿದ ಯಜಮಾನ ಮತ್ತೆ ತುಂಬಿದ ಚೆಂಬಿನ ಮೇಲೆ ಕಂಕಣದ ಕೈ ಇರಿಸಿ ವರನ ಕೈಯಿಂದ ವಧುವಿನ ಕಂಕಣ ಪೂಜೆ ಮಾಡಿಸಿ, ವಧುವಿನ

ಕೈಯಿಂದ ವರನಕಂಕಣ ಪೂಜೆ ಮಾಡಿಸಿ ಬಿಚ್ಚುತ್ತಾರೆ. ಕಂಕಣ ಬಿಚ್ಚಿದ ಮೇಲೆ ಎರಡು ದಿನಗಳ ಶಾಸ್ತ್ರವೆಲ್ಲ ಮುಗಿದಂತೆ ನಂತರ ವಧು ತನ್ನ ಗಂಡನಿಗೆ ಮೊದಲ ಸಿಹಿ ಊಟ ಬಡಿಸುತ್ತಾಳೆ. ಕಜ್ಜಾಯ ತುಪ್ಪದ ಊಟ ಇದಾಗಿರುತ್ತದೆ. ಗಂಡನನ್ನು ಮಣೆ ಮೇಲೆ ಕುರಿಸಿ ಅವನ ಮುಂದೆ ತೇವಟಿಗೆ ಇಟ್ಟು ಕಜ್ಜಾಯ ತುಪ್ಪ ಬಡಿಸುತ್ತಾಳೆ. ಊಟ ವರನ ಕೋಣೆಯಲ್ಲಿ ನಡೆಯುತ್ತದೆ. ಗಂಡ – ಹೆಂಡತಿಯರಾದರು ಎಂದು ಅವರಿಬ್ಬರನ್ನು ಕೆಲಗಳಿಗೆ ಅಂದರೆ ಊಟ ಬಡಿಸುವ ತನಕ ಪ್ರತ್ಯೇಕವಾಗಿ ಬಿಡುತ್ತಾರೆ. ಇದು ಅವರ ದಾಂಪತ್ಯದ ಮೊದಲ ಭೇಟಿಯ ಮಾತುಕತೆಯಾಗುತ್ತದೆ. ಇದು ವರ: ವಧುವಿಗೆ ಅತ್ಯಂತ ರೋಮಾಂಚನವಾದ ನಾಚಿಕೆಯ ಪುಳಕವಾಗುವ ಕ್ಷಣಗಳಾಗಿರುತ್ತವೆ.

## 10. ಒಸಗೆ :

ಪೂರ್ವದಲ್ಲಿ ಬಾಲ್ಯವಿವಾಹ ಪದ್ಧತಿ ಈ ಜನಾಂಗದಲ್ಲಿ ಇದ್ದುದರಿಂದ ಹೆಣ್ಣು ಮೈನೆರೆದ ಮೇಲೆ ಒಳ್ಳೆದಿನ ನೋಡಿ 'ಒಸಗೆ' ಇಟ್ಟುಕೊಳ್ಳುತ್ತಿದ್ದರು. ನಂತರದಲ್ಲಿ ಹುಡುಗಿ ಮೈನೆರೆದಿದ್ದರೂ ಮದುವೆದಿನ 'ಒಸಗೆ' ಮಾಡುತ್ತಿರಲಿಲ್ಲ. ಜ್ಯೇಷ್ಠ, ವೈಶಾಖ ತಿಂಗಳಲ್ಲಿ ಮದುವೆ ಮುಗಿದು ಆಷಾಡದ ತಿಂಗಳು ಪ್ರಾರಂಭವಾಗುವುದರಿಂದ ಈ ಆಷಾಡ ಮಾಸದಲ್ಲಿ ಅಳಿಯ ಅತ್ತೆಯ ಮನೆ ಹೊಸಿಲು ತುಳಿಯಬಾರದೆಂಬ ನಂಬಿಕೆ ಇರುವುದರಿಂದ ಆಷಾಡ ಕಳೆದು ಶ್ರಾವಣ ತಿಂಗಳಲ್ಲಿ ಗೌರಿಹಬ್ಬದೊತ್ತಿಗೆ ಒಸಗೆ ಇಟ್ಟುಕೊಳ್ಳುತ್ತಿದ್ದರು. ಇತ್ತೀಚಿಗೆ ಮದುವೆ ದಿನದ ರಾತ್ರಿಯೇ ಈ ಶಾಸ್ತ್ರವನ್ನು ಮುಗಿಸಿ ಬಿಡುತ್ತಾರೆ.





## 11. ತಾಳಿ :

ತಾಳಿಯನ್ನು ಗಂಡಿನ ಮನೆಯವರು ಚಿನ್ನದಿಂದ ಮಾಡಿಸುತ್ತಾರೆ. ಮನುಷ್ಯ ಶರೀರ ಮತ್ತು ತಲೆಗಳ ಆಕಾರದಲ್ಲಿರುತ್ತದೆ. ಎದೆಯ ಭಾಗದಲ್ಲಿ ಸೂರ್ಯ — ಚಂದ್ರ ಚಿತ್ರಗಳನ್ನು ಬಿಡಿಸುತ್ತಾರೆ. ಶರೀರವನ್ನು ಅರ್ಧಕ್ಕೆ ಸೀಳಿದಂತೆ ಸಣ್ಣದೊಂದು ಗೆರೆ ಇರುತ್ತದೆ. ತಾಳಿಯ ಹಿಂಭಾಗದ ಕತ್ತಿನಲ್ಲಿ ಒಂದು ಹೂವು ಬಿಡಿಸುತ್ತಾರೆ.

ಈ ದಾಂಪತ್ಯಕ್ಕೆ ಸೂರ್ಯ — ಚಂದ್ರರು ಸಾಕ್ಷಿ ಎನ್ನುವ ನಂಬಿಕೆ ಇರುವುದರಿಂದ ಆ ಚಿತ್ರಗಳನ್ನು ಬಿಡಿಸುತ್ತಾರೆ. ಮತ್ತು ಶರೀರವನ್ನು ಸೀಳಿದಕ್ಕೆ ಕಾರಣ ಅರ್ಧನಾರೀಶ್ವರ ಕಲ್ಪನೆಯ ಸಂಕೇತವಾಗಿದೆ. ಇದಕ್ಕೆ ಕೊಂಬು ತಾಳಿಯೆಂದು ಕರೆಯುತ್ತಾರೆ. ಕೆಳಭಾಗ ಕಾಲಿನ ಆಕಾರಕ್ಕೆ ಅನುಗುಣವಾಗಿ ಕೊರೆದಿರುತ್ತಾರೆ. ಮೈಸೂರು ಜಿಲ್ಲೆಯ '24 ಮನೆ ತೆಲುಗು ಶೆಟ್ಟರು' ತಾಳಿಯ ಎದೆಯಲ್ಲಿರುವ ಸೂರ್ಯ — ಚಂದ್ರರನ್ನು ಮೇಲೆ ಮುಖಮಾಡಿ ತಾಳಿಕಟ್ಟಿದರೆ ತಮಿಳುನಾಡಿನವರು ಶಿರದಲ್ಲಿರುವ ಹೂವನ್ನು ಮೇಲೆ ಮುಖ ಮಾಡಿ ತಾಳಿ ಕಟ್ಟುತ್ತಾರೆ.

# ಉಪ ಸಂಹಾರ

1. ಮೂಲತಃ ವಲಸಿಗರಾದ ಈ ಜನಾಂಗ ಆಂಧ್ರ ಮೂಲವನ್ನು ತಮಿಳು ಹಾದಿಯನ್ನು ಕರ್ನಾಟಕದ ನೆಲೆಯನ್ನು ಪ್ರತಿನಿಧಿಸುತ್ತಾರೆ. ವ್ಯಾಪಾರದ ಉದ್ದೇಶದಿಂದ ಒಂದು ಪಂಗಡವಾಗಿ ವಲಸೆ ಬಂದು ಕರ್ನಾಟಕದಲ್ಲಿ ನೆಲೆಯೂರಿದ್ದಾರೆ. ಹೀಗೆ ನೆಲೆಗೊಂಡ ಜನಾಂಗ ತನ್ನ ಜೀವನಾವರ್ತನ ಆಚರಣೆಗಳಲ್ಲಿ ತನ್ನ ಪೂರ್ವ ಪರಂಪರೆಯ ಅಂಶಗಳನ್ನು ಪ್ರತಿನಿಧಿಸುತ್ತದೆ.

2. ವಿಭಿನ್ನ ಭಾಷಾ ನೆಲೆಗಳಲ್ಲಿ ವಿಭಿನ್ನ ಸಂಸ್ಕೃತಿಗಳಲ್ಲಿ ಹಾದು ಬಂದ ಈ ಜನಾಂಗ ನೆಲೆಗೊಂಡ ಸಂಸ್ಕೃತಿಯೊಡನೆ ಸಾಂಸ್ಕೃತಿಕವಾಗಿ ವಿಪರ್ಯಾಸಗಳನ್ನು ಏರ್ಪಡಿಸಿಕೊಂಡಿದೆ.

ತನ್ನ ವಂಶಾಭಿವೃದ್ಧಿಗಾಗಿ ಹೊಂದಾಣಿಕೆ ಮಾಡಿಕೊಂಡ ಜೈವಿಕ ಕ್ರಿಯೆಗಳು ಉದಾಹರಣೆಗೆ ಅಂತರಜಾತಿ ವಿವಾಹ, ವಿಧವಾ ವಿವಾಹ, ಇತ್ಯಾದಿ ಅಂಶಗಳು ಪ್ರಧಾನ ಸಂಸ್ಕೃತಿಯ ಪ್ರಭಾವದಿಂದ ಸೂತಕಗಳಾಗಿ, ಈ ಸೂತಕಗಳನ್ನು ಕಳೆಯುವುದರ ಮೂಲಕವೇ ತನ್ನ ಪರಂಪರೆಯ ವಾಸ್ತವವನ್ನು ಪ್ರತಿನಿಧಿಸುತ್ತದೆ.

3. ಒಂದು ಪಂಗಡವಾಗಿ ಕರ್ನಾಟಕಕ್ಕೆ ವಲಸೆ ಬಂದ ಈ ಜನಾಂಗ ಆಂಧ್ರ–ತಮಿಳು ನಾಡಿನಲ್ಲಿರುವ ಜನಾಂಗದೊಡನೆ ಸಂಪೂರ್ಣ ಸಂಬಂಧ ಕಡಿದುಕೊಂಡಿದೆ.

ಹೀಗೆ ಸಂಬಂಧ ಕಡಿದುಕೊಂಡ 400–500 ವರ್ಷಗಳಾದ ಮೇಲೆ ಸದ್ಯದ ರಾಜಕೀಯ ಕಾರಣಗಳಿಂದ ತನ್ನ ಜಾತಿ ಮೂಲವನ್ನು ಹುಡುಕಿಕೊಳ್ಳಲು ಹೆಣಗಾಡುತ್ತಿದೆ. ವಿಪರ್ಯಾಸವೆಂದರೆ ನೆಲೆಗೊಂಡ ಸಂಸ್ಕೃತಿಯೊಡನೆ ಸಾಂಸ್ಕೃತಿಕವಾಗಿ ಸಾಮರಸ್ಯವನ್ನು ಸಾಧಿಸಿಕೊಂಡ ಈ ಜನಾಂಗ ತನ್ನ ಆಚರಣೆಗಳ ಮೂಲಕ ವಿಪರ್ಯಾಸಗಳನ್ನು ಪ್ರತಿನಿಧಿಸುತ್ತಿದೆ ಮತ್ತು ಪ್ರಧಾನ ಸಂಸ್ಕೃತಿಯೊಡನೆ ತನ್ನ ಸಂಸ್ಕೃತಿಯನ್ನು ಪ್ರತಿನಿಧಿಸುವಲ್ಲಿ ಉಂಟಾಗುವ ಸಾಂಸ್ಕೃತಿಕ ವೈರುಧ್ಯಗಳು ಇವರ ಮದುವೆ ಸಂಪ್ರದಾಯಗಳಲ್ಲಿ ಹೆಚ್ಚು ಕಂಡು ಬರುತ್ತದೆ.

4. ತನ್ನ ಕುಲ ಕಸುಬಾದ ವ್ಯಾಪಾರದ ಮೂಲಕ ಅಭಿವೃದ್ಧಿಯನ್ನು ಸಾಧಿಸಬೇಕಿದ್ದ ಜನಾಂಗ ಅಂತರರಾಷ್ಟ್ರೀಯ ವ್ಯಾಪಾರ ನಿಯಮಗಳು ಪ್ರಬಲ ವರ್ಗದ ಬಂಡವಾಳ ವ್ಯವಸ್ಥೆಯೊಡನೆ ಪೈಪೋಟಿ ಕೊಡಲು ಸಾಧ್ಯವಾಗದೆ ಜೀವನ ನಿರ್ವಹಣೆಗೆ ನಡೆಸುವ ಸೆಣಸಾಟಗಳನ್ನು ಈ ಜನಾಂಗದ ಇಂದಿನ ವ್ಯಾಪಾರ ಕಸುಬುಗಳ ಮೂಲಕ ಗಮನಿಸಬಹುದು.

5. ಆಚರಣೆಗಳಲ್ಲಿ ಜೀವನ ವಿಧಾನಗಳಲ್ಲಿ ವೈವಿಧ್ಯತೆಗಳಿಂದ ತುಂಬಿಕೊಂಡಿದ್ದ ಸಂಸ್ಕೃತಿ ಒಂದು ವ್ಯವಸ್ಥೆಯ ಒತ್ತಡದಿಂದ ಜಾತಿ ಮೂಲದ ಹುಡುಕಾಟದತ್ತ ಸಾಗಿದೆ.

6. ತನ್ನ ಜೀವನ ನಿರ್ವಹಣೆಗಾಗಿ ಅಲೆಯುವ ಈ ಜನಾಂಗ ಎಲ್ಲಾ ಕಾಲದ ಎಲ್ಲಾ ಸಂಸ್ಕೃತಿಗಳಿಗೂ ತೆರೆದುಕೊಂಡು ಹಾಗೂ ತನ್ನ ಸಂಸ್ಕೃತಿಯ ಅನನ್ಯತೆಯನ್ನು ತನ್ನ ಆಚರಣೆಗಳಲ್ಲಿ ಪ್ರತಿನಿಧಿಸುತ್ತಾ ಸಾಗಿದೆ. ಇಂತಹ ಸಂಸ್ಕೃತಿಗೆ ಒಟ್ಟು ಚರಿತ್ರೆಯ ಜೀವನ ಕ್ರಮ ಹಿನ್ನೆಲೆಯಾಗಿದೆ. ಒಂದು ಕಾಲ ಘಟ್ಟದ ಚಿಂತನ ಕ್ರಮಗಳಿಂದ ಇವುಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನವಷ್ಟೇ ಇದಾಗಿದೆ.

: ಅ ನು ಬಂ ಧ :

ಈ ಜನಾಂಗದ ಮಾಂಬಳ್ಳಿಯ ವೆಂಕಟರಮಣಪ್ಪ ಎಂಬುವರು ತುಳುವಿನಲ್ಲಿ ಹೇಳಿದ ದಂಡಿನ ಕತೆಯ ಕನ್ನಡ ಲಿಪಿಯಲ್ಲಿ ಕೊಟ್ಟಿದ್ದೇನೆ. ಇವರಾಡುವ ಭಾಷೆ ಯಾವ ಲಿಪಿಯನ್ನು ಬಳಸುವುದಿಲ್ಲ. ಈ ಭಾಷೆ ಮೌಖಿಕವಾಗಿ ಬಳಕೆಯಾಗುತ್ತಿದೆ. ಈ ಜನಾಂಗ ಲಿಖಿತ ಸಂವಹನಕ್ಕೆ ಕನ್ನಡ ಭಾಷೆಯನ್ನು ಬಳಸುತ್ತಾರೆ. ಆದ್ದರಿಂದ ಇವರಾಡುವ ತುಳು ಭಾಷೆ ಯಾವ ಲಿಪಿಯ ರೂಪವೂ ಬಂದಿಲ್ಲ.

<u>ದಂಡಿನ ಕತೆ</u> :

ಅದಾಕ್ಕ, ಮಾ ಯಾಗಕ್ಷತ್ರಿಯುಲ್ಲು ಅಂತೇ ಯಾಮು ನೇಸಕೀ ಪೋಯಿಂತ್ರೇ, ಎವಿಳ, ಯುದ್ಧಧಿಕಿ ಪೋಯಿಂತ್ರೇ, ಮನವಗಲ್ಲಿ ಯುದ್ಧವಿಕೀ ಪೋಯಬೋದಾಕ್ಕ ಕುಕ್ಕಲು ಜೋತಾಕ್ಕ ಪಿರ್ಬನೀ ಪೋತ್ರಿ. ಕುಕ್ಕಲು ಜೋತಾಕ್ಕ ಪಿರ್ಬನಿ ಪೋಯ ಬೋದ್ಕ ಆಚಾರೆಕಲ್ಲಿ ಎವರ ನಡ್ಪಿ ಪೋತ್ರಿ....... 'ಮಾಮುಗಾರತ್ತೇ ಎಲ್ಲ ಸಮೇತಮೇಗಿ ಮಣ್ಣಮು ನೋರತ್ತೇ ಕುಕ್ಕಲು ಮೋತ್ರ ಮಣ್ಣ' ಅನಿ ನಡ್ಸಿ ಪೋತ್ರಿ, ಏಮಿಂತೇ ಯಾಮನೋ ತಲಮಾರಾಕ್ಕ ಎಮೋ ಆಕ್ಕಲ ನಬ್ಬಿಸಿ ಪೋತ್ರಿ.

ಎಮೇಗಾ ಯುದ್ಧಂಮನಾ ಗೆಲ್ತಿರೇ, ಮಾ ತಲಗುಂಪಾರು ಗೆಲ್ತಿರೇ ಯುದ್ಧಮುನಾ, ಯುದ್ಧಮುನಾ ಗೆಲ್ಬಂದಿಕೀ ಈ ಕುಕ್ಕಲುಕಿ ಗೆಲ್ತಿರೇ ಅನದಿ ನಮ್ಮಾನಮು ಎಡಮೋಯಿಂದು, ಬೀರಿಕಿ ಗೆಲ್ತಿರೇನೇ ಸಂತೋಷಮುಕೀ ಎಂದೋ ಮಾಗಾರ್ಕ ಮಣ್ಣ ಧತ್ರಮೊಕ್ಕೇ ಎಂದೋ ಮಣ್ಣ ಪಡಕ್ಕನಿಸ್ತೇ. ಈ ಕುಕ್ಕಲ್ಲಿ ಪಾರಿಂದ ಇಟ್ಲಕಿ ಮಣ್ಣನಾ. ಕುಕ್ಕಲು ಮತ್ತೇ ನೋತಿಸ್ತೇ ಅನಿಸಿ ಎಲ್ಲ ಅಗ್ನಿ ಪ್ರವೇಶಮು ನೇಸಿತ್ರೇ. ಅಪ್ಪುಡು ಮನವಾರು ಆಚಾರು ರಾಕ್ಕೆಕ್ಕ ಬೊಮ್ಮಳಗಿತ್ತಾ ಪೋಯಿಂದು ಕೊಂದದಿಂತ್ರೇ.

ಅನಾದಿಯಿಂದಾ ಭಾರತಯುಗ ಬೌದ್ಧ ಬಿಕ್ಕುಗರ ವೇಷವು ಎಸಿ, ಆ ವೇಷವು ಎನನಪ್ಪುದೇ ಮುನವಾರು ಜಾತಕೀ ಎತ್ತುಸದೇ. ಅಂದಿನಿಂದಿವತ್ತಿಕೀ ಮುನವಾರ ಆಚಾರಲ್ಲಾ ವೇರ ಜಾತಿ.

## ಎ.ಥಾ ವತ್ತಾದ ಕನ್ನಡ ರೂಪ :

ಅದಾ, ನಮ್ಮ ಯೋಗಕ್ಷತ್ರಿಯರು ಅಂಧ್ರೇ ಯೋಗವನ್ನ್ ಮಾಡಕ ಹೋಗಿದ್ರು. ಏನು, ಯುದ್ಧಕ್ಕ ಹೋಗಿದ್ರು, ನಮ್ಮವರೆಲ್ಲ ಯುದ್ಧಕ್ಕ ಹೋಗಾಹೊತ್ತಿನ್ಲ್ಲ ನಾಯಿಗಳನ್ನು ಜೊತೆಯಲ್ಲ ಕರೆದುಕೊಂಡು ಹೋದ್ರು ನಾಯಿಗಳನ್ನು ಜೊತೆಯಲ್ಲ ಕರೆದುಕೊಂಡು ಹೋಗುವ / ಹೊತ್ತಿನಲ್ಲಿ ಹೆಂಗಸರಿಗೆಲ್ಲ ಏನ ಹೇಳುದ್ರು, 'ನಾವ ಗೆದ್ದರೆ ಎಲ್ಲ ಸಮೇತವಾಗಿ ಬತ್ತೀವಿ ಸೋತರೆ ನಾಯಿಗಳು ಮಾತ್ರ ಬತ್ತಾವೆ'. ಎಂದು ಹೇಳಿಬಿಟ್ಟು ಹೋದ್ರು. ಏನಂದ್ರೇ ಯಾವುದೋ ತಲವಾರರಲ್ಲಿ ಏನೋ ಹಾಗೆ ಹೇಳಿಬಿಟ್ಟು ಹೋದ್ರು ಏನಾಯ್ತು, ಯುದ್ಧದಲ್ಲಿ ಗೆದ್ರು ನಮ್ಮ ತೆಲುಗಿನವರು ಗೆದ್ದರು ಯುದ್ಧದಲ್ಲಿ. ಯುದ್ಧದಲ್ಲಿ ಗೆದ್ದುದಕ್ಕೆ ಈ ನಾಯಿಗಳಿಗೆ ಏನು, ಗೆದ್ದರು ಅನ್ನೋದು ಸಮಾಧಾನವಾಗೋಯ್ತು. ಇವರಿಗೆ ಗೆದ್ದರಲ್ಲ ಸಂತೋಷ ಎಲ್ಲಾ ಒಂದೂರಲ್ಲ ಬಂದು ಛತ್ರದಲ್ಲೋ ಎಲ್ಲಾ ಬಂದು ಮಲಿಕಂಡ್ರು. ನಾಯಿಗಳೆಲ್ಲ ಓಡಿಕೊಂಡು ಮನೆ ಬಂದವು. ನಾಯಿಗಳು ಬಂದ್ರೇ ಸೋತುಬಿಟ್ರು ಅಂದುಕೊಂಡು ಎಲ್ಲ ಅಗ್ನಿಗೆ ಪ್ರವೇಶ ಮಾಡಿದ್ರು. ಆಗ, ನಮ್ಮವರು ಹೆಂಗಸರಿಲ್ಲದ ಬಿಕ್ಕುಳಗಿತ್ತಿಯನ್ನು ಹೋಗಿ ತಂದು ಕೊಂಡರು;

ಆ ದಿನದಿಂದ ಧಾರೆಯಾಗುವ ಹೊತ್ತಿನಲ್ಲಿ ಬಿಕ್ಕುಳಗಿತ್ತಿವೇಷವನ್ನು ಹಾಕಿ ಆ ವೇಷ ಹಾಕುವಹೊತ್ತಿನಲ್ಲೇ ನಮ್ಮವರು ಜಾತಿಗೇ ಎತ್ತಿಕೊಳ್ಳುವುದು. ಅಂದಿನಿಂದ ಹಿಂದಕ್ಕೆ ನಮ್ಮವರ ಹೆಣ್ಣುಗಳೆಲ್ಲ ಬೇರೆ ಜಾತಿ

## ನಿರೂಪಕರು

1. ವೆಂಕಟರಮಣ ಶೆಟ್ಟಿ
   ವಯಸ್ಸು: 72
   ಕಳಲೆ, ನಂಜನಗೂಡು ತಾಲ್ಲೂಕು
   ಮೈಸೂರು ಜಿಲ್ಲೆ
2. ಶ್ರೀ ಮಾದಶೆಟ್ಟಿ
   ವಯಸ್ಸು:60
   ಕಳಲೆ, ನಂಜನಗೂಡು ತಾಲ್ಲೂಕು
   ಮೈಸೂರು ಜಿಲ್ಲೆ.
3. ಶ್ರೀ ಕೃಷ್ಣಶೆಟ್ಟಿ
   ವಯಸ್ಸು:75
   ಕಳಲೆ, ನಂಜನಗೂಡು ತಾಲ್ಲೂಕು
   ಮೈಸೂರು ಜಿಲ್ಲೆ.
4. ಶ್ರೀ ರುದ್ರಮುನಿ
   ವಯಸ್ಸು:54
   ಮಾಂಬಳ್ಳಿ, ಯಳಂದೂರು ತಾಲ್ಲೂಕು,
   ಮೈಸೂರು ಜಿಲ್ಲೆ.
5. ಶ್ರೀ ವೆಂಕಟೋರೀಣಪ್ಪ
   ವಯಸ್ಸು:50
   ಮಾಂಬಳ್ಳಿ, ಯಳಂದೂರು ತಾಲ್ಲೂಕು,
   ಮೈಸೂರು ಜಿಲ್ಲೆ.
6. ಶ್ರೀ ಸುಬ್ಬಶೆಟ್ಟಿ
   ವಯಸ್ಸು:67
   ಸಾಗರ,ಹೆಚ್.ಡಿ.ತಾಲ್ಲೂಕು
   ಮೈಸೂರು ಜಿಲ್ಲೆ.
7. ಪುಟ್ಟಮ್ಮ, ವಯಸ್ಸು:65
   ಸಾಗರ, ಹೆಚ್.ಡಿ.ಕೋಟೆ ತಾಲ್ಲೂಕು,
   ಮೈಸೂರು ಜಿಲ್ಲೆ.
8. ಶ್ರೀ ರಾಮಕೃಷ್ಣಶೆಟ್ಟಿ
   ವಯಸ್ಸು: 75
   ದೊಡ್ಡಿಂದುವಾಡಿ
   ಕೊಳ್ಳೇಗಾಲ ತಾಲ್ಲೂಕು
9. ಮಹಾದೇವಮ್ಮ, ವಯಸ್ಸು:65
   ದೊಡ್ಡಿಂದುವಾಡಿ, ಕೊಳ್ಳೇಗಾಲ
   ತಾಲ್ಲೂಕು, ಮೈಸೂರು ಜಿಲ್ಲೆ.
10. ಶ್ರೀ ವೆಂಕಟಸ್ವಾಮಿ, ವಯಸ್ಸು: 70
    ಕೌದಳ್ಳಿ, ಕೊಳ್ಳೇಗಾಲ ತಾಲ್ಲೂಕು
    ಮೈಸೂರು ಜಿಲ್ಲೆ.
11. ಪೊನ್ನಗಂ, ವಯಸ್ಸು:50
    ಕೊಳ್ಳೇಗಾಲ ತಾಲ್ಲೂಕು
    ಮೈಸೂರು ಜಿಲ್ಲೆ.
12. ಪುಟ್ಟರಾಜು ಡಿ.ಸಿ.
    ವಯಸ್ಸು:40
    ದೊಡ್ಡಿಂದವಾಡಿ, ಕೊಳ್ಳೇಗಾಲ
    ಮೈಸೂರು ಜಿಲ್ಲೆ.
13. ಶ್ರೀ ಚಿನ್ನಸ್ವಾಮಿ ಶೆಟ್ಟಿ
    ವಯಸ್ಸು:49
    ಸಾಗರೆ, ಹೆಚ್.ಡಿ.ಕೋಟೆ ತಾಲ್ಲೂಕು
    ಮೈಸೂರು ಜಿಲ್ಲೆ.
14. ಶ್ರೀ ವೆಂಕಟಪ್ಪ
    ವಯಸ್ಸು:60
    ಹ್ಯಾಂಡಪೋಸ್ಟ್, ಹೆಚ್.ಡಿ.ಕೋಟೆ
15. ನೇರಳೆ ಸಿದಂಶೆಟ್ಟಿ
    ವಯಸ್ಸು:56
    ಕಳಲೆ, ನಂಜನಗೂಡು ತಾಲ್ಲೂಕು
    ಮೈಸೂರು ಜಿಲ್ಲೆ.

## : ಗ್ರಂಥ ಸೂಚಿ :


1. ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ.

    1993, ಇಂಗ್ಲೀಷ್ ಮೂಲ: ಶ್ರೀಪಾದ ಅಮೃತ ಡಾಂಗೆ

    ಕನ್ನಡಕ್ಕೆ : ಎಮ್.ಅನಂತಕೃಷ್ಣ ಹಬ್ಬಾರ್,
    ಎಸ್.ರಾಮಚಂದ್ರ ಉಡುಪ,
    ಅಭಿವ್ಯಕ್ತಿ ಪ್ರಕಾಶನ, ಮಂಗಳೂರು.

2. ಯುಗಯಾತ್ರೀ ಭಾರತೀಯ ಸಂಸ್ಕೃತಿ.

    (ಸಂಪುಟ – 1)

    1970, ಪ್ರಧಾನ ಸಂಪಾದಕರು: ಡಾ.ಕೆ.ವಿ.ಪುಟ್ಟಪ್ಪ,
    ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,

3. ಯುಗಯಾತ್ರೀ ಭಾರತೀಯ ಸಂಸ್ಕೃತಿ.

    (ಸಂಪುಟ – 2)

    1971, ಪ್ರಧಾನ ಸಂಪಾದಕರು :ಡಾ: ಕೆ.ವಿ.ಪುಟ್ಟಪ್ಪ
    ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,

4. ಯುಗಯಾತ್ರೀ ಭಾರತೀಯ ಸಂಸ್ಕೃತಿ:

    (ಸಂಪುಟ – 4)

    1988, ಪ್ರಧಾನ ಸಂಪಾದಕರು: ಡಾ:ಕೆ.ವಿ.ಪುಟ್ಟಪ್ಪ
    ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

5. ಸಿಂದ ಮಾದಿಗರ ಸಂಸ್ಕೃತಿ
    1993, ಕೋಟಿಗಾನ ಹಳ್ಳಿ ರಾಮಯ್ಯ
    ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

6. ಮಾಸ್ಕೀಕರ ಸಂಸ್ಕೃತಿ
    1993, ಲಕ್ಷೀಪತಿ ಕೋಲಾರ
    ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು .

7. ಮಾನವನ ಐಹಿಕ ಅಭ್ಯುದಯ
(ರಾಷ್ಟ್ರಗಳ ಸಂಪತ್ತಿನ ಕತೆ)
1963, ಮೂಲ: ಲಿಯೋ ಹ್ಯೂಬರ್ಮನ್
ಅನುವಾದ: ಹೆಚ್.ಎಸ್.ಕೃಷ್ಣಸ್ವಾಮಿ
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ — ದೆಹಲಿ.

8. ಪರಿವರ್ತನಾ ಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು.
(ಸಂಪುಟ — 1)
1982, ಮೂಲ: ಸ್ವಾಮಿ ರಂಗನಾಥನಂದ
ಅನುವಾದ: ತ.ಸು. ಶಾಮರಾಯ, ಕೆ.ವಿ.ನಾರಾಯಣ,
ಎಸ್.ವೆಂಕಟರಾಮನ್
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

9. ಕರಾವಳಿ ಜಾನಪದ
ಪುರುಷೋತ್ತಮ ಬಿಳಿಮಲೆ 1990

10. ಶಾಸನಗಳಲ್ಲಿ ಕರ್ನಾಟಕದ ವರ್ತಕರು
ಬಿ.ಆರ್.ಹಿರೇಮಠ 1989
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

11. ಕೊರಗರ ಸಂಸ್ಕೃತಿ
ಡಾ: ಪುರುಷೋತ್ತಮ ಬಿಳಿಮಲೆ
1993, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

12. ಕಪ್ಪು ಹೊಲೆಯರ ಸಂಸ್ಕೃತಿ
ಕೇಶವ ಪ್ರಸಾದ್
1993, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

## ENGLISH REFERENCE

1. CASTES AND TRIBES OF SOUTHERN INDIA
EDGAR THURSTON, K. RANGACHARI
VOLUME -II

2. HIERARCHY AND MARRIAGE ALLIANCE IN SOUTH INDIAN KINSHIP
- LOUIS DUMONT

. 1957.ROYAL ANTHROLOGICAA INSTITUTE
OF GREAT BRITAIN AND IRELAND

ಕ್ಷೇತ್ರ ಕಾರ್ಯದಲ್ಲಿ ಜನಾಂಗದವರಿಂದ ಪಡೆದ ಮದುವೆ ಚಿತ್ರಗಳ ಸರಳವನ್ನು ಚಿತ್ರಗಳನ್ನು ಮುಂದಿನ ಪುಟಗಳಲ್ಲಿ ಕೊಟ್ಟಿದ್ದೇನೆ.

ಚಿ ತ್ರ ಗ ಳು :-

1) ಬೆಳ್ಳಾಳಗಿತ್ತಿ ವೇಷದಲ್ಲಿರುವ ವಧು.
2) ಸೀಕೆನೂಳ್(ಸೂತಕದ ನೀರು) ಪೂಜೆ.
3) ಕಂಬ ಮುಹೂರ್ತಕ್ಕೆ ಹುತ್ತದ ಮಣ್ಣು ತರುತ್ತಿರುವ ಮುತ್ತೈದೆಯರು.
4) ಹುತ್ತ ಪೂಜೆ ಮಾಡುತ್ತಿರುವ ಎಂಟು ಮನೆ ಯಜಮಾನ.
5) ಕಂಕಣ ಶಾಸ್ತ್ರ.
6) ಬೆಳ್ಳಾಳಗಿತ್ತಿ ವೇಷ ಹಾಕಿ ಕಂಬಕ್ಕೆ ಕಳಸದ ನೀರಿನಿಂದ ಪೂಜೆ ಮಾಡುವ ವಧು ಮತ್ತು ವಧುವಿನ ಸೋದರ ಅತ್ತೆ.

